# ಸಿಪಿಕೆ ಅವರ ಕಾವ್ಯ ಒಂದು ಅಧ್ಯಯನ

ಈ ನಿಬಂಧವನ್ನು ಕನ್ನಡ ವಿಶ್ವವಿದ್ಯಾನಿಲಯಕ್ಕೆ ಎಂ.ಫಿಲ್. (ಕನ್ನಡ) ಪದವಿಗಾಗಿ ಅರ್ಪಿಸಲಾಗಿದೆ.


ಸಂಶೋಧಕ

ಚಂದ್ರ ಎಂ.ಇ.

ನೋಂದಣಿ ಸಂಖ್ಯೆ: ಕೆ.ಆರ್.ಎಸ್.ಎಮ್.ಕೆ.ಎಸ್-೦೦೫೫೬

ಮಾರ್ಗದರ್ಶಕರು

ಡಾ|| ಎ.ಆರ್. ಮದನಕುಮಾರ

ಸಹ ಪ್ರಾಧ್ಯಾಪಕರು, ಕನ್ನಡ ವಿಭಾಗ

ಸರ್ಕಾರಿ ಮಹಿಳಾ ಕಾಲೇಜು, ಮಂಡ್ಯ.





ಕರ್ನಾಟಕ ಸಂಘ (ರಿ), ಮಂಡ್ಯ

ಎಂ.ಎಲ್. ಶ್ರೀಕಂಠೇಗೌಡ ಸಂಶೋಧನಾ ಕೇಂದ್ರ

(ಕನ್ನಡ ವಿ.ವಿ.ಯಿಂದ ಮಾನ್ಯತೆ ಪಡೆದಿದೆ)

ಮಂಡ್ಯ

೨೦೧೧-೧೨

# ಸಿಪಿಕೆ ಅವರ ಕಾವ್ಯ ಒಂದು ಅಧ್ಯಯನ

ಈ ನಿಬಂಧವನ್ನು ಕನ್ನಡ ವಿಶ್ವವಿದ್ಯಾನಿಲಯಕ್ಕೆ ಎಂ.ಫಿಲ್. (ಕನ್ನಡ) ಪದವಿಗಾಗಿ ಅರ್ಪಿಸಲಾಗಿದೆ.


ಸಂಶೋಧಕ

**ಚಂದ್ರ ಎಂ.ಇ.**

ನೋಂದಣಿ ಸಂಖ್ಯೆ: ಕೆ.ಆರ್.ಎಸ್.ಎಮ್.ಕೆ.ಎಸ್-೦೦೫೫೬

ಮಾರ್ಗದರ್ಶಕರು

**ಡಾ॥ ಎ.ಆರ್. ಮದನಕುಮಾರ**

ಸಹ ಪ್ರಾಧ್ಯಾಪಕರು, ಕನ್ನಡ ವಿಭಾಗ

ಸರ್ಕಾರಿ ಮಹಿಳಾ ಕಾಲೇಜು, ಮಂಡ್ಯ.





ಕರ್ನಾಟಕ ಸಂಘ (ರಿ), ಮಂಡ್ಯ

ಎಂ.ಎಲ್. ಶ್ರೀಕಂಠೇಗೌಡ ಸಂಶೋಧನಾ ಕೇಂದ್ರ

(ಕನ್ನಡ ವಿ.ವಿ.ಯಿಂದ ಮಾನ್ಯತೆ ಪಡೆದಿದೆ)

ಮಂಡ್ಯ

೨೦೧೧–೧೨

# ದೃಢೀಕರಣ ಪತ್ರ

"ಸಿಪಿಕೆ ಅವರ ಕಾವ್ಯ ಒಂದು ಅಧ್ಯಯನ" ಎಂಬ ವಿಷಯದ ಮೇಲೆ ಈ ನಿಬಂಧವನ್ನು ಕನ್ನಡ ವಿಶ್ವವಿದ್ಯಾನಿಲಯದ ಎಂ.ಫಿಲ್ (ಕನ್ನಡ) ಪದವಿಗೆ ವಿದ್ಯಾರ್ಥಿಯಾದ ಚಂದ್ರ. ಎಂ.ಇ ಅವರು ನನ್ನ ಮಾರ್ಗದರ್ಶನ ಹಾಗೂ ಮೇಲ್ವಿಚಾರಣೆಯಲ್ಲಿ ಬರೆದು ಒಪ್ಪಿಸುತ್ತಿದ್ದಾರೆಂದು ಹಾಗೂ ಈ ವಿಷಯದ ಬಗ್ಗೆ ಬೇರೆ ಯಾರಿಗೂ ನಾನು ಮಾರ್ಗದರ್ಶನ ಮಾಡಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಮಾರ್ಗದರ್ಶಕರ ಸಹಿ

(ಡಾ॥ ಎ.ಆರ್. ಮದನಕುಮಾರ)
ಸಹ ಪ್ರಾಧ್ಯಾಪಕರು ಕನ್ನಡ ವಿಭಾಗ,
ಸರ್ಕಾರಿ ಮಹಿಳಾ ಕಾಲೇಜು, ಮಂಡ್ಯ.

ದಿನಾಂಕ: ೨೨-೦೬-೨೦೧೭
ಸ್ಥಳ : ಮಂಡ್ಯ

# ಪ್ರಮಾಣ ಪತ್ರ

**'ಸಿಪಿಕೆ ಅವರ ಕಾವ್ಯ ಒಂದು ಅಧ್ಯಯನ'** ಎಂಬ ವಿಷಯದ ಮೇಲೆ ಈ ನಿಬಂಧವನ್ನು **ಡಾ॥ ಎ.ಆರ್. ಮದನಕುಮಾರ** ಅವರ ಮಾರ್ಗದರ್ಶನದಲ್ಲಿ ನನ್ನ ಸಂಶೋಧನೆಯ ಫಲವಾಗಿ ರಚಿಸಲ್ಪಟ್ಟು ವಿಶ್ವ ವಿದ್ಯಾನಿಲಯದ **ಎಂ.ಫಿಲ್. (ಕನ್ನಡ)** ಪದವಿಗೆ ಅರ್ಪಿಸುತ್ತಿದ್ದೇನೆ.

ಈ ನಿಬಂಧವನ್ನು ಹಿಂದಿನ ವರ್ಷಗಳಲ್ಲಿ ಯಾರು ಇಲ್ಲಿಯವರೆಗೆ ಯಾವುದೇ ವಿಶ್ವವಿದ್ಯಾನಿಲಯಕ್ಕೆ ಒಪ್ಪಿಸಿಲ್ಲವೆಂದು ನಾನು ಇಲ್ಲಿ ಪ್ರಮಾಣೀಕರಿಸುತ್ತಿದ್ದೇನೆ.

**ಚಂದ್ರ ಎಂ.ಇ.**

ದಿನಾಂಕ : 27-06-2012 ಎಂ.ಫಿಲ್. ವಿದ್ಯಾರ್ಥಿ

ಸ್ಥಳ : ಮಂಡ್ಯ. ನೋಂದಣಿ ಸಂಖ್ಯೆ: ಕೆ.ಆರ್.ಎಸ್.ಎಮ್.ಕೆ.ಎಸ್–00೫೫೬

# ಸಿಪಿಕೆ ಅವರ ಕಾವ್ಯ ಒಂದು ಅಧ್ಯಯನ

## ಪರಿವಿಡಿ

ಅಧ್ಯಾಯ-೧

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಕಾವ್ಯ ಕಟ್ಟುವ ಕಲೆ ಸೃಜನಾತ್ಮಕವಾದುದು. ಅದು ನಿತ್ಯ ನಿರಂತರವಾಗಿ ನಡೆಯುತ್ತಾ ಬಂದಿದೆ. ಆಧುನಿಕ ಸಾಹಿತ್ಯ ಸಂದರ್ಭ ಸಂಪ್ರದಾಯ ಬದ್ಧ ಕಟ್ಟುಪಾಡುಗಳಿಂದ ಹೊರಬಂದು ಹೊಸ ಬದಲಾವಣೆಯೊಂದಿಗೆ ಕಾಣಿಸಿಕೊಂಡಿತು. ಅದರ ಪ್ರಕಾರದಲ್ಲಿ ವೈವಿಧ್ಯತೆ ಉಂಟಾಯಿತು. 'ಕಾವ್ಯ' ಕವಿಗಳ ಪ್ರಭಲ ಮಾಧ್ಯಮವಾಯಿತು. ಪಾಶ್ಚಾತ್ಯ ಪ್ರಭಾವ ಮತ್ತು ದೇಶೀಯ ಸತ್ವವನ್ನು ತನ್ನದಾಗಿಸಿಕೊಂಡ ಕವಿಗಳು ಕಾವ್ಯ ಸೃಷ್ಟಿಯಲ್ಲಿ ತೊಡಗಿದರು. ಕಾವ್ಯದ ವಸ್ತುವಿನಲ್ಲಿ ವೈವಿಧ್ಯತೆ ಕಾಣಿಸಿಕೊಂಡು ಜೀವಂತಿಕೆಯನ್ನು ಪಡೆದುಕೊಂಡಿತು. ಓದುಗರ ಮೆಚ್ಚುಗೆಗೂ ಪಾತ್ರವಾಯಿತು. ಹೀಗೆ ಹುಟ್ಟಿಕೊಂಡ ಸಾಹಿತ್ಯವನ್ನು ಧ್ಯೇಯ-ಧೋರಣೆಗನುಗುಣವಾಗಿ ನವೋದಯ, ಪ್ರಗತಿಶೀಲ, ನವ್ಯ, ಬಂಡಾಯ-ದಲಿತ ಎಂದು ವಿಭಾಗ ಮಾಡಿಕೊಂಡೆವು. 'ಶ್ರೀ' ಅವರಿಂದ ಮೊದಲುಗೊಂಡು ಇಂದಿನವರೆಗಿನ ಎಲ್ಲಾ ಕವಿಗಳು ಅಂದಂದಿನ ಕಾವ್ಯ ಚಳುವಳಿಗೆ ಸ್ಪಂದನೆ ನೀಡುತ್ತಾ ವಿಪುಲವಾದ ಕಾವ್ಯ ಕೃಷಿಗೆ ಕಾರಣರಾಗಿದ್ದಾರೆ.

ಸಿ.ಪಿ.ಕೆ. ಅವರು ನವೋದಯ ಮತ್ತು ನವ್ಯದ ಸಂಧಿಕಾಲದಲ್ಲಿ ಬರವಣಿಗೆ ಆರಂಭಿಸಿ ಯಾವುದೇ ಚಳುವಳಿ, ತತ್ವ, ಚಿಂತನೆ, ವಾದಗಳಿಗೆ ಅಂಟಕೊಳ್ಳದೆ ತಮ್ಮ ಅನುಭವಮೂಸೆಗೆ ಬಂದ, ಕಾವ್ಯವಾಗಬಲ್ಲ, ಕಾವ್ಯವಾಗಬಯಸಿದ ಎಲ್ಲವನ್ನು ವಸ್ತುವಾಗಿಸಿಕೊಂಡರು. ಸಿ.ಪಿ.ಕೆ. ಅವರ ಕಾವ್ಯದ ಬಗ್ಗೆ ಶಿವರಾಮು ಕಾಡನಕುಪ್ಪೆ ಅವರು ಈ ರೀತಿ ಅಭಿಪ್ರಾಯಪಟ್ಟಿದ್ದಾರೆ: "ಸಿ.ಪಿ.ಕೆ ಅವರು ಕಾವ್ಯ ಬರೆದ ಹೊತ್ತಿಗೆ ಕನ್ನಡದಲ್ಲಿ ನವ್ಯಪಂಥ ಪ್ರಬಲವಾದ 'ವಾದ'ವಾಗಿತ್ತು. ನವೋದಯ ಕಾಲದ ಮೇರು ಕೃತಿಗಳು ವರ್ತಮಾನಕ್ಕೆ ಸವಾಲೆಸೆಯುತ್ತಿದ್ದ ಕಾಲ. ಕನ್ನಡದ ಬಹುಪಾಲು ಕವಿಗಳು ಪಶ್ಚಿಮಮುಖಿಗಳಾಗಲು ಹವಣಿಸುತ್ತಿದ್ದ ಕಾಲ. ಸಿಪಿಕೆ ಅವರ ಕಾವ್ಯಮನೋಧರ್ಮ ಆರಿಸಿಕೊಂಡಿದ್ದು ನವೋದಯ ಅಥವಾ ನವ್ಯಮಾರ್ಗಗಳನ್ನಲ್ಲ, ಅವೆರಡರ ಸಮನ್ವಯ ಮಾರ್ಗನ್ನು"[೧] ಎಂದಿದ್ದಾರೆ. ಹೀಗೆ ಸಮನ್ವಯ ಮಾರ್ಗದಲ್ಲಿ ನಡೆದ ಸಿಪಿಕೆ ಅವರ ಕಾವ್ಯವನ್ನು ಮುಖ್ಯವಾಗಿ ಕಾವ್ಯ, ವಚನಗಳು, ಮುಕ್ತಕಗಳು, ಹನಿಗವನಗಳು (ಚುಟುಕುಗಳು) ಸೂಕ್ತಿಸಾಹಿತ್ಯ ಎಂದು ವಿಭಾಗ ಮಾಡಿಕೊಳ್ಳಬಹುದು.

ಸಿಪಿಕೆ ಅವರ ಕಾವ್ಯಪಯೋಧಿ ವಿಸ್ತಾರವಾದುದು. ವಸ್ತು ಮತ್ತು ವಿಚಾರಗಳಲ್ಲಿ ವೈವಿಧ್ಯತೆ ಹೊಂದಿರುವಂತದ್ದು. ಎಚ್ಚೆಸ್ಕೆ ಅವರು ಹೇಳುವಂತೆ "ಸಿ.ಪಿ.ಕೆ. ಅವರ ಪಾಂಡಿತ್ಯ ಸಾಮಾನ್ಯವಾದ್ದಲ್ಲ. ಆದರೆ ಅದು ಅವರ ರಸಜ್ಞತೆಯನ್ನೆಂದೂ ಬತ್ತಿಸಿಲ್ಲ, ಸೃಜನಾತ್ಮಕತೆಯ ಒರತೆಯನ್ನು ಇಂಗಿಸಿಲ್ಲ. ಪಾಂಡಿತ್ಯವನ್ನು ಮಾರಿಯಂತೆ ತಲೆಯ ಮೇಲೆ ಹೊತ್ತು ಅವರೆಂದೂ ಮೆರೆಸುವುದಿಲ್ಲ". ಹೀಗೆ ಪಾಂಡಿತ್ಯ, ಪ್ರತಿಭೆಯಿಂದ ಮತ್ತು ಸೃಜನಾತ್ಮಕತೆಯಿಂದ ಕೂಡಿರುವ ಅವರ ಕಾವ್ಯಗಳ ಅಧ್ಯಯನ ನಡೆದಿಲ್ಲ. ಸಿ.ಪಿ.ಕೆ. ಅವರ ಸಾಹಿತ್ಯ ಕುರಿತು ಡಾ: ಟಿ.ಕೆ. ಕೆಂಪೇಗೌಡ ಅವರು 'ಸಿಪಿಕೆ ಸಾಹಿತ್ಯ ಸಮೀಕ್ಷೆ' ಎಂಬ ಕೃತಿ ರಚನೆ ಮಾಡಿದ್ದಾರೆ. ಇದರಲ್ಲಿ ಸಿ.ಪಿ.ಕೆ ಅವರ ಸಮಗ್ರ ಸಾಹಿತ್ಯವನ್ನು ವಿಶ್ಲೇಷಿಸಿದ್ದಾರೆ. ಆದ್ದರಿಂದ ಈ ನಿಬಂಧದಲ್ಲಿ 'ಸಿಪಿಕೆ ಸಮಗ್ರ ಕವಿತೆ' ಎಂಬ ಕೃತಿಯನ್ನು

ಆಧಾರವಾಗಿಟ್ಟುಕೊಂಡು ಅದರಲ್ಲಿರುವ ಕವನಗಳಲ್ಲಿ ಪ್ರಕೃತಿ, ಸಮಾಜ, ಜೀವನ ಮತ್ತು ತಾತ್ವಿಕತೆ, ನಾಡು–ನುಡಿ, ವ್ಯಕ್ತಿ ಚಿತ್ರಣಗಳಿಗೆ ಸಂಬಂಧಿಸಿದವುಗಳನ್ನು ಅಧ್ಯಯನ ಮಾಡಿ ಅವರ ಚಿಂತನೆ, ಕಾಳಜಿ, ತತ್ವ, ನಿಲುವು, ಆಸಕ್ತಿ, ಒಲವುಗಳನ್ನು ಅನಾವರಣಗೊಳಿಸುವುದು ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

'ಸಿಪಿಕೆ ಅವರ ಕಾವ್ಯ: ಒಂದು ಅಧ್ಯಯನ ಎಂಬ ನಿಬಂಧವು ಮುಖ್ಯವಾಗಿ ಆಧುನಿಕ ಕನ್ನಡ ಕಾವ್ಯದ ಹುಟ್ಟು ಮತ್ತು ಬೆಳವಣಿಗೆ, ಸಿಪಿಕೆ ಅವರ ಬದುಕು–ಬರಹ, ಸಿಪಿಕೆ ಅವರ ಕಾವ್ಯ ಚಿಂತನೆಗಳ ಕುರಿತ ವಿಷಯ ವ್ಯಾಪ್ತಿಯನ್ನು ಹೊಂದಿದೆ.

ಆಧುನಿಕ ಕನ್ನಡ ಕಾವ್ಯದ ಹುಟ್ಟಿಗೆ ಮೂಲ ಪ್ರೇರಣೆ ಪ್ರಭಾವ ಯಾವುದು? ಅದರ ಬೆಳವಣಿಗೆಯಲ್ಲಿ ಪಾಶ್ಚಾತ್ಯ ಸಾಹಿತ್ಯ ಮತ್ತು ಇಂಗ್ಲಿಷ್ ಶಿಕ್ಷಣದ ಪಾತ್ರ ಏನು? ಪರಂಪರೆಯಿಂದ ಹೊರಬಂದು ಹೇಗೆ ಹೊಸತನವನ್ನು, ಮೈಗೂಡಿಸಿಕೊಂಡಿತು. ಧ್ಯೇಯ ಧೋರಣೆಗಳಿಗೆ ಅನುಗುಣವಾಗಿ ನಡೆದ ವಿಭಾಗ ಕ್ರಮ, ಆಯಾ ಕಾಲಘಟ್ಟಗಳಿಗೆ ಸ್ಪಂಧಿಸಿದ ಪ್ರಮುಖ ಕವಿಗಳು ಇತ್ಯಾದಿ ಅಂಶಗಳು ಚರ್ಚೆಯ ವಿಷಯಗಳಾಗಿವೆ.

ಕನ್ನಡ ಸಾಹಿತ್ಯ ಲೋಕದಲ್ಲಿ ಮಹತ್ತರ ಪಾತ್ರ ವಹಿಸಿರುವ, ಅಗಾಧ ಸೇವೆ ಸಲ್ಲಿಸುತ್ತಿರುವ ಸಿಪಿಕೆ ಅವರ ಬದುಕನ್ನು ಕುರಿತಂತೆ ಅವರ ಹುಟ್ಟು, ಬೆಳವಣಿಗೆ, ವಿದ್ಯಾಭ್ಯಾಸ, ಕೃತಿಗಳು, ಸಂದ ಗೌರವ ಸನ್ಮಾನಗಳು ಪಡೆದ ಪ್ರಶಸ್ತಿಗಳು, ಅವರಿಗಾದ ಸ್ಫೂರ್ತಿ, ಪ್ರೇರಣೆಗಳು ಮುಂತಾದ ಪ್ರಮುಖ ಅಂಶಗಳನ್ನು ಅನಾವರಣಗೊಳಿಸಲಾಗಿದೆ.

'ಸಿಪಿಕೆ ಅವರ ಕಾವ್ಯ ಚಿಂತನೆ' ಅಧ್ಯಯನದ ಕೇಂದ್ರ ಭಾಗವಾಗಿದ್ದು, ಮೊದಲೇ ಹೇಳಿದಂತೆ ಅವರ ಕಾವ್ಯಗಳಲ್ಲಿ ಮುಖ್ಯವಾಗಿ ಪ್ರಕೃತಿ, ಜೀವನ ತಾತ್ವಿಕತೆ, ಸಮಾಜ, ನಾಡು–ನುಡಿ, ವ್ಯಕ್ತಿ ಚಿತ್ರಣ ಕುರಿತ ಅಂಶಗಳನ್ನು ಉಪ ಅಧ್ಯಾಯಗಳನ್ನಾಗಿ ಮಾಡಿಕೊಂಡು ವಿಶ್ಲೇಷಿಸಲಾಗಿದೆ.

ಪ್ರಕೃತಿಯನ್ನು ಕಾವ್ಯವಸ್ತುವಾಗಿಸಿಕೊಳ್ಳದ ಕವಿಗಳಿಲ್ಲ. ಅಂತೆಯೇ ಸಿ.ಪಿ.ಕೆ ಅವರು. ಆದರೆ ಅವರ ದರ್ಶನಲ್ಲಿ ವಿಶಿಷ್ಟತೆ ಇರುವುದನ್ನು ಕಾಣಬಹುದು. ಸೂರ್ಯ, ಚಂದ್ರ, ಮಳೆ, ಕಾಮನಬಿಲ್ಲು, ಮಿಂಚು, ಬೆಳಕು, ಇರುಳು ಎಲ್ಲದರ ಸೊಬಗು, ವೈಭವ ರೌದ್ರತೆ, ಚಿತ್ರಿತಗೊಂಡು ಅದು ಜೀವನದೊಂದಿಗಿರುವ ಸಂಬಂಧದ ಸ್ವರೂಪವನ್ನು ತಿಳಿಸಿರುವ ಬಗ್ಗೆ ವಿನೂತನವಾಗಿದೆ. ಪ್ರಕೃತಿಯ ಸೊಬಗಿನಿಂದಾದ ಆನಂದ ಒಂದು ಕಡೆಯಾದರೆ, ಅದರ ಭೀಕರತೆಯಿಂದಾದ ಭಯ ಮತ್ತೊಂದು ಕಡೆ. ಆಧುನಿಕತೆಯ ಪರಿಣಾಮವಾಗಿ ಮನುಷ್ಯ, ಪ್ರಕೃತಿಯ ಮೇಲೆ ಎಸಗಿದ ದಾಳಿಯಿಂದಾಗಿ ಅದು ನಾಶಗೊಂಡು ಸಮತೋಲನ ತಪ್ಪುತ್ತಿರುವುದರ ಬಗ್ಗೆ ಆತಂಕವನ್ನು, ಅದು ಹೀಗೆ ಮುಂದುವರೆದರೆ ಮನುಷ್ಯನ ನಾಶ ಖಂಡಿತ ಎಂಬ ಎಚ್ಚರಿಕೆಯ ಸಂದೇಶವನ್ನು ಕವನಗಳಲ್ಲಿ ಗುರುತಿಸಲಾಗಿದೆ.

'ಜೀವನ ಬಲು ದೊಡ್ಡದು, ಅದನ್ನು ಹಾನಿಮಾಡಿಕೊಳ್ಳಬೇಡಿರೋ' ಎಂಬ ದಾಸರ ಮಾತಿನಂತೆ ಜೀವನದ ಮಹತ್ವವನ್ನು ತಿಳಿಯಬೇಕಾದುದು ಬಹಳ ಮುಖ್ಯ. ಜೀವ ಹುಟ್ಟಿದಂದಿನಿಂದ ಜೀವನವು ಆರಂಭಗೊಂಡು ಸಾಯುವವರೆಗೂ ನಿರಂತರ ನಡೆಯುತ್ತಲೇ ಇರುತ್ತದೆ. ಅಲ್ಲಿ ಎದುರಾಗುವ ಘಟನೆಗಳು ಹಲವು. ಸಂದಿಗ್ಧತೆ, ದ್ವಂದ್ವ, ಎದುರಿಸಬೇಕಾದ

ಪರೀಕ್ಷೆಗಳು, ಹಿಂದಿನ ನೆನಪು, ವಾಸ್ತವದ ಚಿತ್ರಣ, ಅಂದುಕೊಂಡದ್ದು ನಡೆಯದಿದ್ದಾಗ ಆಗುವ ನಿರಾಸೆ, ಪಡುವ ಪಾಡು, ಜೀವನದಲ್ಲಿ ದೈವದ ಪಾತ್ರ, ಹಿರಿಯರ ಆದರ್ಶ, ಹೆಣ್ಣು ನಿರ್ವಹಿಸುವ ಪಾತ್ರ, ಜೀವನದ ಅದ್ಭುತಗಳು, ಬಾಳ ಕತ್ತಲೆ ತೊಲಗಿಸೆಂದು ದೈವಕ್ಕೆ ಮೊರೆ ಹೋಗುವ ಪರಿ, ವೃದ್ಧಾಪ್ಯದ ಚಿಂತೆ, ಸಂಬಂಧಗಳು, ಆಸೆ ಆಕಾಂಕ್ಷೆಗಳು, ಜೀವನದ ಭದ್ರತೆಗಾಗಿ, ನಂಬಿದವರಿಗಾಗಿ ಎಸಗುವ ಕೃತ್ಯಗಳು, ಸೋದರ ಸಂಬಂಧ, ದಿಟ್ಟತನ ಇವೆಲ್ಲವನ್ನು ಸಂಕೇತ, ಪ್ರತಿಮೆಗಳ ಮೂಲಕ ಹೇಳುವ ರೀತಿಯನ್ನು ತೆರೆದಿರಿಸಲಾಗಿದೆ. ಬದುಕನ್ನು ಸಾರ್ಥಕಗೊಳಿಸಿಕೊಳ್ಳಬೇಕೆಂಬ ಆಶಯ ವ್ಯಕ್ತವಾಗಿರುವ ಬಗೆ ಕೂಡ ಇದರ ವ್ಯಾಪ್ತಿಗೆ ಒಳಪಡುತ್ತದೆ.

ಸಮಾಜ ಎಂದ ಕೂಡಲೇ ಮನುಷ್ಯ ಮತ್ತು ಪರಿಸರದ ಪಾತ್ರ ಮುಖ್ಯವಾಗಿ ಕಾಣುತ್ತದೆ. ಸಮಾಜ– ಮನುಷ್ಯ, ಸಮಾಜ–ಪ್ರಕೃತಿ, ಸಮಾಜ–ಜೀವನ ಇವುಗಳ ಸಂಬಂಧ ಬಹಳ ಮುಖ್ಯ. ಹಾಗೆಯೇ ಅಲ್ಲಿ ಜೀವನ ನಡೆಸುವ ಮನುಷ್ಯನು ಸಮಾಜ ಪರ ಧೋರಣೆಗಳನ್ನು ಹೊಂದಿರಬೇಕು ಎಂಬುದು ಅವಶ್ಯಕ ಅಂಶವಾಗಿದೆ. ಸಮಾಜದಲ್ಲಿ ಬದುಕು ಸಾಗಿಸುವ ಸಂದರ್ಭದಲ್ಲಿ ಮನುಷ್ಯ–ಮನುಷ್ಯ ಮತ್ತು ಮನುಷ್ಯ–ಪ್ರಕೃತಿ ನಡುವೆ ನಡೆಯುವ ಹೋರಾಟ ಬಹಳ ಮುಖ್ಯವಾಗುತ್ತದೆ. ಸ್ನೇಹ, ಸೌಹಾರ್ದ್ರತೆಯಿಂದ ಬದುಕಬೇಕಾದ ನರನು ಸ್ವಾರ್ಥ ಮತ್ತು ದುರಾಸೆಯಿಂದ ಹೊಟ್ಟೆಕಿಚ್ಚು ಪಡುತ್ತಾ ಇತರರನ್ನು ದೂಷಿಸುತ್ತಾ ಅಹಂಕಾರದಿಂದ ಮೆರೆವ ಮಾನವ ಸಮಾಜದಲ್ಲಿ ಪಡೆಯುತ್ತಿರುವ ಸ್ಥಾನ ಇತ್ಯಾದಿ ಅಂಶಗಳನ್ನು ವಿಶ್ಲೇಷಿಸಲಾಗಿದೆ.

ಭವ್ಯ ಪರಂಪರೆ, ಇತಿಹಾಸ ಹೊಂದಿರುವ ಭಾರತ ದೇಶ, ಸಂಸ್ಕೃತಿಯ ನೆಲೆವೀಡಾದ ಕನ್ನಡ ನಾಡು, ನುಡಿಗಳನ್ನು ಕುರಿತು ಪ್ರೀತಿ, ಉತ್ಕಟ ಅಭಿಮಾನ ಗೌರವ, ಕಾಳಜಿ, ಆತಂಕ, ಅನುಸರಿಸಬೇಕಾದ ನಿಲುವು ಇತ್ಯಾದಿ ಅಂಶಗಳನ್ನು ಗುರುತಿಸಲಾಗಿದೆ. ಗತವೈಭವದಿಂದ ವಂಚಿತರಾಗುತ್ತಿರುವ ಪ್ರಸ್ತುತ ವ್ಯವಸ್ಥೆಗೆ ಸೂಕ್ಷ್ಮವಾಗಿ ಸ್ಪಂದಿಸಿರುವ ರೀತಿ, ಪ್ರತಿಯೊಬ್ಬ ಭಾರತೀಯನೂ, ಕನ್ನಡಿಗನೂ ಕೈಗೊಳ್ಳಬೇಕಾದ ಕಾರ್ಯಗಳು, ಕನ್ನಡಿಗನೇ ಕನ್ನಡ ಮಾತೆಯನ್ನು ಕಡೆಗಣಿಸುತ್ತಿರುವುದಕ್ಕೆ ವಿಷಾದ, ಪ್ರಕೃತಿಯ ರಮಣೀಯತೆ, ಸಮೃದ್ಧ ಇತಿಹಾಸ, ದಿವ್ಯ ಪುರುಷರನ್ನು ಕಂಡ ನಾಡು ಅದೆಲ್ಲವನ್ನು ಹಂತ ಹಂತವಾಗಿ ಕಳೆದುಕೊಳ್ಳುತ್ತಿರುವುದಕ್ಕೆ ಕೊರಗನ್ನು ವ್ಯಕ್ತಪಡಿಸಿದ್ದಾರೆ. ಇಂಥ ಇನ್ನೂ ಅನೇಕ ಅಂಶಗಳು ಅಧ್ಯಯನ ವ್ಯಾಪ್ತಿಗೆ ಒಳಪಡುತ್ತವೆ.

ಸಮಾಜ ಮತ್ತು ನಾಡನ್ನು ಕಟ್ಟುವಲ್ಲಿ ವಿಭೂತಿ ಪುರುಷರು ಮತ್ತು ಮಹಾನ್ ವ್ಯಕ್ತಿಗಳ ಪಾತ್ರ ಗಮನಾರ್ಹವಾದುದು. ಬುದ್ಧ, ಗಾಂಧಿ, ಬಸವ ಇವರ ಅಹಿಂಸಾ ನೀತಿ, ನಡೆ–ನುಡಿ, ಸರಳ ಬದುಕು ಇವು ಮನುಷ್ಯ ಜೀವನದ ಮೇಲೆ ದಟ್ಟ ಪ್ರಭಾವ ಬೀರಿವೆ. ಮದರ್ ತೆರೆಸಾರ ಸೇವಾ ಮನೋಭಾವ, ನೆಲ್ಸನ್ ಮಂಡೇಲಾರ ಹೋರಾಟ ಇವು ಪ್ರಸ್ತುತ ಸಮಾಜಕ್ಕೆ ಅವಶ್ಯಕ ಅಂಶಗಳಾಗಿವೆ. ದೇವರಾಜ ಅರಸು, ನೆಹರು, ಅಂಬೇಡ್ಕರ್, ಕೆಂಗಲ್ ಹನುಮಂತಯ್ಯ ಮುಂತಾದ ರಾಜಕಾರಣಿಗಳಿಂದಾದ ಜನಮೆಚ್ಚಿದ ಸಾಧನೆ, ಕೈಗೊಂಡ ಕಾರ್ಯಗಳನ್ನು ಕಟ್ಟಿಕೊಟ್ಟಿದ್ದಾರೆ. ಅವು ಇಂದಿನ ದುಷ್ಟ, ಭ್ರಷ್ಟ, ಅಪ್ರಾಮಾಣಿಕ ರಾಜಕಾರಣಿಗಳು ತಲೆತಗ್ಗಿಸುವಂತಿವೆ. ಹಿರಿಯ ಸಾಹಿತಿಗಳಾದ ಬಸವಣ್ಣ, ಅಂಬಿಗರ ಚೌಡಯ್ಯ, ಪಂಜೆ, ಬಿ.ಎಂ.ಶ್ರೀ, ಕುವೆಂಪು, ಬೇಂದ್ರೆ, ಮಾಸ್ತಿ, ಕಾರಂತರು, ಕಣವಿ ಮುಂತಾದ ವ್ಯಕ್ತಿತ್ವವನ್ನು ಚಿತ್ರಿಸಿದ್ದಾರೆ. ಜೊತೆಗೆ ಆ ಹಿರಿಯ ಚೇತನಗಳಿಂದ

ಸಿ.ಪಿ.ಕೆ. ಅವರಿಗೆ ದೊರೆತ ಸ್ಫೂರ್ತಿ, ಪ್ರೇರಣೆ, ಪ್ರಭಾವ ಇತ್ಯಾದಿ ವಿಚಾರಗಳು ಈ ಅಧ್ಯಯನದ ವ್ಯಾಪ್ತಿಯಲ್ಲಿ ಬರುತ್ತವೆ.

ಒಟ್ಟಾರೆಯಾಗಿ ಈ ನಿಬಂಧವು ಕಾವ್ಯದ ಹುಟ್ಟು ಬೆಳವಣಿಗೆ, ಸಿ.ಪಿ.ಕೆ ಅವರ ಪರಿಚಯ ಮತ್ತು ಅವರ ಕಾವ್ಯ ಚಿಂತನೆಯನ್ನು ಒಳಗೊಂಡಿದ್ದು, ಅವರ ಸೃಜನಶೀಲತೆ, ಔಚಿತ್ಯಕ್ಕೆ ತಕ್ಕ ಪ್ರತಿಕ್ರಿಯೆ, ಕಾಯಕ ನಿಷ್ಠೆ, ಕನ್ನಡ ನಿಷ್ಠೆ, ಮುಂತಾದ ವಿಚಾರಗಳನ್ನು ಅನಾವರಣಗೊಳಿಸುತ್ತದೆ.

**ಅಡಿ ಟಿಪ್ಪಣಿಗಳು**

೧. ಸಿಪಿಕೆ ಸಾಹಿತ್ಯ ಸಮೀಕ್ಷೆ- ಡಾ. ಟಿ.ಕೆ. ಕೆಂಪೇಗೌಡ, ಪು.ಸಂ. ೧೧೨. ಕಣ್ವ ಪ್ರಕಾಶನ, ಬೆಂಗಳೂರು, ೨೦೧೦

೨. ಸಿಪಿಕೆ ಸಮಗ್ರ ಕವಿತೆ–೧೯೫೫–೨೦೦೦, ಸಂವಹನ ಮೈಸೂರು.

ಅಧ್ಯಾಯ–೨

# ಆಧುನಿಕ ಕನ್ನಡ ಕಾವ್ಯದ ಹುಟ್ಟು ಮತ್ತು ಬೆಳವಣಿಗೆ

ಪ್ರಾಚೀನ ಕನ್ನಡ ಸಾಹಿತ್ಯದಂತೆ ಆಧುನಿಕ ಕನ್ನಡ ಸಾಹಿತ್ಯವು ತನ್ನದೇ ಆದ ದೀರ್ಘ ಇತಿಹಾಸವನ್ನು ಹೊಂದಿದೆ. ಅದು ಕಾಲ, ದೇಶ, ಪರಿಸರ ಪರಿಸ್ಥಿತಿಗಳಿಗೆ ಅನುಗುಣವಾಗಿ ಬದಲಾಗುತ್ತಾ, ರೂಪುಗೊಳ್ಳುತ್ತಾ ಬಂದಿದೆ. ಪ್ರಾಚೀನ ಸಾಹಿತ್ಯಕ್ಕೆ ಸಂಸ್ಕೃತದ ಪ್ರಭಾವ ದಟ್ಟವಾದಂತೆ ಹೊಸಗನ್ನಡ ಸಾಹಿತ್ಯದ ಮೇಲೆ ಪಾಶ್ಚಾತ್ಯರ ಅದರಲ್ಲಿಯೂ ಮುಖ್ಯವಾಗಿ ಇಂಗ್ಲೀಷರ ಪ್ರಭಾವ ಅಗಾಧವಾದುದು. ತನ್ನದೇ ಆದ ಪ್ರಾಚೀನ ಗತಿಯಲ್ಲಿ ಸಾಗಿದ್ದ ಸಾಹಿತ್ಯ ಪರಂಪರೆ ಹೊಸ ಸಾಹಿತ್ಯದ ಪ್ರಭಾವವನ್ನು ತನ್ನೊಂದಿಗೆ ಸೇರಿಸಿಕೊಂಡು ತನ್ನ ವ್ಯಾಪ್ತಿಯನ್ನು ಓಗ್ಗಿಸಿಕೊಳ್ಳುವ ಪ್ರಯತ್ನ ನಡೆಸಿತು.

೧೯೨೧ ರಲ್ಲಿ ಪ್ರೊ. ಬಿ.ಎಂ.ಶ್ರೀ ಅವರ 'ಇಂಗ್ಲೀಷ್ ಗೀತೆಗಳು' ಪ್ರಕಟವಾಯಿತು. ಇಲ್ಲಿಗೆ ಆಧುನಿಕ ಸಾಹಿತ್ಯದ ಹೆದ್ದಾರಿ ತೆರೆಯಿತು ಎನ್ನಬಹುದು. ಈ ಹೊತ್ತಿಗಾಗಲೇ ಆಧುನಿಕ ಸಾಹಿತ್ಯದ ಅರುಣೋದಯವು ಮುದ್ದಣನ 'ರಾಮಾಶ್ವಮೇಧ' ಎಂ.ಎಸ್.ಪುಟ್ಟಣ್ಣನವರ ಕಾದಂಬರಿ 'ಮಾಡಿದ್ದುಣ್ಣೋ ಮಹಾರಾಯ', ಉತ್ತರ ಕನ್ನಡ ಜಿಲ್ಲೆಯಲ್ಲಿ ರಚಿತವಾದುದೆಂದು ಹೇಳಲಾದ 'ಇಗ್ಗಪ್ಪ ಹೆಗ್ಗಡೆ ಪ್ರಹಸನ' ಮೊದಲಾದ ಕೃತಿಗಳಲ್ಲಿ ಕಂಡಿತ್ತು. ಆದರೆ 'ಇಂಗ್ಲೀಷ್ ಗೀತಗಳ' ಮನೋಧರ್ಮ ಅದರ ಪ್ರಯೋಗಶೀಲತ್ವ ,ಪ್ರಭಾವ ಇವನ್ನು ಪರಿಗಣಿಸಿದಾಗ ಆಧುನಿಕ ಕನ್ನಡ ಸಾಹಿತ್ಯ ಈ ಕೃತಿಯಲ್ಲಿ ತನ್ನ ಉದಯವನ್ನು ಸಾರಿ ಹೇಳಿತು.

೧೯ನೇ ಶತಮಾನದ ಉತ್ತಾರ್ಧದಲ್ಲಿಯೇ 'ಆಧುನಿಕ ಕನ್ನಡ ಸಾಹಿತ್ಯದ' ಆರಂಭವಾಗಿ ೨೦ನೇ ಶತಮಾನದಲ್ಲಿ ಹುಲುಸಾಗಿ ಸಾಗಿತು. ಅಂದಿನ ವಸಾಹತುಶಾಹಿ ಸಂಸ್ಕೃತಿಯ ಪರಿಣಾಮದ ಫಲದಿಂದ ಪ್ರವೇಶವಾದ ಶಿಕ್ಷಣ ಪದ್ಧತಿ, ಮುದ್ರಣ, ಆಡಳಿತ ವ್ಯವಹಾರ, ಹೊಸ ಶಿಕ್ಷಣ ಪದ್ಧತಿ, ಹೊಸ ವಿಚಾರ ಸರಣಿ, ವಿಜ್ಞಾನ, ತಂತ್ರಜ್ಞಾನ, ಇಂಗ್ಲೀಷ್ ಸಾಹಿತ್ಯ, ಕೈಗಾರಿಕೀಕರಣ, ಸಂಸ್ಕೃತೀಕರಣ, ಅಂದಿನ ಆಂಗ್ಲ ಕ್ರೈಸ್ತ ಮಿಶನರಿಗಳು ಧಾರ್ಮಿಕವಾಗಿ, ಸಾಂಸ್ಕೃತಿಕವಾಗಿ ಮತ್ತು ಸಾಮಾಜಿಕವಾಗಿ ಉಂಟುಮಾಡಿದ ಎಚ್ಚರ ಇವೆಲ್ಲವು ಭಾರತೀಯ ಬದುಕಿನಲ್ಲಿ ಬದಲಾವಣೆಯನ್ನು ತಂದವು. ವ್ಯಕ್ತಿಯ ಸಮಷ್ಟಿ ಬದುಕಿನಲ್ಲಿ ಹೊಸ ದೃಷ್ಟಿ–ಧೋರಣೆ, ಸ್ವಾತಂತ್ರ್ಯ ಪ್ರಜ್ಞೆ, ರಾಷ್ಟ್ರೀಯ ಮನೋಧರ್ಮ, ಸಾಂಸ್ಕೃತಿಕ ಪುನರುಜ್ಜೀವನ, ವೈಜ್ಞಾನಿಕ ಮನೋಭಾವನೆ, ಪ್ರಾದೇಶಿಕ ಮತ್ತು ಭಾರತೀಯ ಭಾವೈಕ್ಯತೆ, ಪ್ರಜಾಪ್ರಭುತ್ವದ ಆಸ್ಥೆ, ವಿಶ್ವಪ್ರಜ್ಞೆ, ಸರ್ವೋದಯ, ಸಮಾನತೆ ಮತ್ತು ಸಹೋದರತ್ವ, ಮಾನವೀಯ ಪ್ರೇಮ, ಜಾತ್ಯಾತೀತ ಮನೋಧರ್ಮ, ದೇಶಾಭಿಮಾನ ಇನ್ನು ಮೊದಲಾದ ಹೊಸ ಆಶೋತ್ತರಗಳು ಕಾಣಿಸಿಕೊಳ್ಳುವ ಮೂಲಕ ಆಧುನಿಕ ಕನ್ನಡ ಸಾಹಿತ್ಯದ ಉದಯಕ್ಕೆ ಭದ್ರ ಬುನಾದಿಯಾದವು. ಇದರ ಪರಿಣಾಮವಾಗಿ ಸಾಹಿತ್ಯ ದೈವ ಕೇಂದ್ರದಿಂದ ಮನುಷ್ಯ ಕೇಂದ್ರದೆಡೆಗೆ ನಡೆಯಿತು. ಮನುಷ್ಯ ಮತ್ತು ದೇವರ ಸಂಬಂಧ ಮಾತ್ರವಲ್ಲದೆ ಇತರ ಸಂಬಂಧಗಳು ಅಷ್ಟೇ ಮೌಲ್ಯಾಯುತವಾದವು ಎಂಬುದನ್ನು ಮನಗಂಡು ಅವನ ಭಾವನೆಗಳು, ಆಸೆಗಳು, ಕನಸುಗಳು ಎಲ್ಲ ಕಾವ್ಯದ ವಸ್ತುವಾದವು.

ಇಂಗ್ಲೀಷ್ ವಿದ್ಯಾಭ್ಯಾಸ ಕ್ರಮದಿಂದ ಹೊಸ ವಿಷಯಗಳ ಅಧ್ಯಯನ ಸಾಧ್ಯವಾಯಿತು. ಚಾರಿತ್ರಿಕ ಪ್ರಜ್ಞೆ, ಸ್ವಾತಂತ್ರ್ಯ ಪ್ರೇಮ. ಪ್ರಜಾಪ್ರಭುತ್ವ ಶ್ರದ್ಧೆ ಇವು ಜನಮನದಲ್ಲಿ ಬೇರೂರಿದವು. ಅನೇಕರು ಪಾಶ್ಚಾತ್ಯ ವಿದ್ಯಾಭ್ಯಾಸದಿಂದ ಸಮಾಜದಲ್ಲಿನ ಅನಿಷ್ಟ ಪದ್ಧತಿಗಳನ್ನು ಖಂಡಿಸಲು ಮತ್ತು ಪ್ರಶ್ನಿಸಲು ಸಾಧ್ಯವಾಯಿತು. ಈಶ್ವರಚಂದ್ರ ವಿದ್ಯಾಸಾಗರ, ದೇವೇಂದ್ರನಾಥ ಠಾಕೂರ, ವಿವೇಕಾನಂದ, ರಾಮತೀರ್ಥ, ದಯಾನಂದ ಸರಸ್ವತಿ ಮೊದಲಾದವರ ಪ್ರಭಾವ ಭಾರತದ ಮೇಲಾಯಿತು ಭಾರತೀಯ ಇತಿಹಾಸ, ತತ್ವಚಿಂತನೆ, ಸಾಹಿತ್ಯ ಇವನ್ನು ಪಾಶ್ಚಾತ್ಯರು ಮೆಚ್ಚಿದ್ದು ಇಲ್ಲಿಯವರಿಗೆ ಅವುಗಳಲ್ಲಿ ಗೌರವವನ್ನು ಆಸಕ್ತಿಯನ್ನು ಉಂಟುಮಾಡಿವು. ಪಾಶ್ಚಾತ್ಯರ ಅಧ್ಯಯನ ವಿಧಾನ ಮಾರ್ಗದರ್ಶಕವಾಯಿತು. ಅಂದಿನ ವಿದ್ಯಾರ್ಥಿಗಳು ಭಾಸರ್‌ನ ಕವನಗಳು ಶೇಕ್ಸ್‌ಪಿಯರ್‌ನ ನಾಟಕಗಳು, ಪ್ಲೇಟೋನ ಸಂಭಾಷಣೆಗಳ ಅನುವಾದ, ಮಿಲ್ಟನ್, ವರ್ಡ್ಸ್‌ವರ್ತ್, ಷೆಲ್ಲಿ, ಕೀಟ್ಸ್, ಬ್ರೌನಿಂಗ್, ಟೆನಿಸನ್,ಆರ್ನಲ್ಡ್ ಮೊದಲಾದವರ ಕವನಗಳು, ಜೇನ್‌ಆಸ್ಟಿನ್, ಸ್ಕಾಟ್, ಥ್ಯಾಕರೆ ಮೊದಲಾದವರ ಕಾದಂಬರಿಗಳನ್ನು ಅಭ್ಯಾಸ ಮಾಡುತ್ತಿದ್ದರು. ಇಂಗ್ಲೀಷ್ ಸಾಹಿತ್ಯ ಇಂಗ್ಲೆಂಡಿನ ಚರಿತ್ರೆ ಇವುಗಳ ಅಧ್ಯಯನದಿಂದ ಎಲ್ಲವನ್ನು ಪ್ರಶ್ನಿಸುವ, ವಿಶ್ಲೇಷಿಸುವ ಮನೋಧರ್ಮದ ಪರಿಚಯವಾಯಿತು. ಸಾಹಿತ್ಯ-ಜೀವನಗಳ ಸಂಬಂಧ ಎಷ್ಟು ವ್ಯಾಪಕವಾದುದು, ನಿಕಟವಾದುದು, ಹೇಗೆ ಸಾಹಿತ್ಯ ಸಮಾಜದ ಮತ್ತು ವ್ಯಕ್ತಿಯ ಜೀವನದ ಎಲ್ಲ ಸಂವೇದನೆಗಳಿಗೆ ಸ್ಪಂದಿಸುತ್ತದೆ ಎಂಬುದರ ದರ್ಶನವಾಯಿತು. "ವಚನಗಳಲ್ಲಿ ದಾಸಸಾಹಿತ್ಯದಲ್ಲಿ ಭಾವಗೀತೆಯ ಅಂಶ ಕನ್ನಡದಲ್ಲಿ ಪ್ರಕಟವಾಗಿತ್ತು. ಆದರೆ ಇಂಗ್ಲೀಷ್ ಭಾಷೆಯ ಭಾವಗೀತೆಯ ಸಂಪತ್ತು ರೋಮಾಂಚನಗೊಳಿಸುವಂತಹದು, ಮನುಷ್ಯನ ಅತಿ ಸೂಕ್ಷ್ಮ ಭಾವನೆಗಳು, ಕನಸುಗಳು. ನೋವು ನಿರಾಸೆಗಳು ಎಲ್ಲ ಉತ್ಕೃಷ್ಟ ಕಾವ್ಯದಲ್ಲಿ ಅಭಿವ್ಯಕ್ತಗೊಂಡ ಆ ಕಾವ್ಯದ ಅಭ್ಯಾಸ ಕನ್ನಡಿಗನ ಪಾಲಿಗೊಂದು ವಿಶಿಷ್ಟ ಅನುಭವವಾಯಿತು".[೨]

ರೊಮ್ಯಾಂಟಿಕ್ ಕವಿಗಳು ನಿಸರ್ಗದಲ್ಲಿ ಜೀವಂತವಾದ ಜಗತ್ತನ್ನು ಕಂಡರು. ಪಾಶ್ಚಾತ್ಯ ಕಾವ್ಯದಲ್ಲಿ ನಿಸರ್ಗ ಒಂದು ಜೀವಂತ ಶಕ್ತಿ, ಚೆಲುವಿನ ತವರು, ಮಿತ್ರ, ಗುರು ಎಲ್ಲ ಆಗಿದೆ ನಿಸರ್ಗದೊಡಗಿನ ಈ ಒಡನಾಟ. ನಿಸರ್ಗದ ಸ್ವರೂಪ-ವ್ಯಾಪಾರಗಳಲ್ಲಿ ಈ ಬೆರಗು ಭಾರತೀಯ ಲೇಖಕನಿಗೆ ಹೊಸದು.

ಆಧುನಿಕ ಕನ್ನಡ ಸಾಹಿತ್ಯದ ಹುಟ್ಟಿಗೆ ಪಾಶ್ಚಾತ್ಯ ಪ್ರಭಾವ ಮಾತ್ರವಲ್ಲದೆ ದೇಶೀಯ ಪ್ರಭಾವಗಳೂ ಕೂಡ ಪರಿಣಾಮಕಾರಿ ಪಾತ್ರ ವಹಿಸಿವೆ. ಭಾರತದ ಸ್ವಾತಂತ್ರ್ಯ ಹೋರಾಟ ನಮ್ಮ ನಾಡು, ಸಂಸ್ಕೃತಿಗಳಲ್ಲಿ ಅಭಿಮಾನವನ್ನು ಮೂಡಿಸಿತು. ಜನರ ಭಾಷೆಯ ಬಳಕೆ ಅವಶ್ಯಕವಾಯಿತು. ಸ್ವಾತಂತ್ರ್ಯದ ಹೋರಾಟ, ದೇಶ ಪ್ರೇಮ ಗೀತೆಗಳ ರಚನೆಗೆ ಪ್ರೋತ್ಸಾಹಕೊಟ್ಟಿತು. ಪಾಶ್ಚಾತ್ಯ ವಿದ್ವಾಂಸರು ಭಾರತದ ಚರಿತ್ರೆ, ತತ್ವಶಾಸ್ತ್ರ, ಇತಿಹಾಸಗಳಲ್ಲಿ ವಿಶಿಷ್ಟ ಆಸಕ್ತಿ ವಹಿಸಿ ಸಂಶೋಧನೆ ನಡೆಸಿದರು. ಅವರ ಕೃತಿಗಳು ಕನ್ನಡಿಗರಿಗೆ ತಮ್ಮ ಸಾಂಸ್ಕೃತಿಕ ಸಂಪತ್ತನ್ನು ಅಧ್ಯಯನ ಮಾಡಲು ದಾರಿದೀಪಗಳಾದವು. ಹೀಗೆ ಪಾಶ್ಚಾತ್ಯ ಮತ್ತು ದೇಶೀಯ ಪ್ರೇರಣೆ ಪ್ರಭಾವಕ್ಕೊಳಗಾಗಿ ಒಂದು ಸ್ಪಷ್ಟ ರೂಪ ಪಡೆದ ಆಧುನಿಕ ಕನ್ನಡ ಸಾಹಿತ್ಯವನ್ನು ಮುಖ್ಯ ಪ್ರವೃತ್ತಿಗಳಿಗೆ ಅನುಗುಣವಾಗಿ ನವೋದಯ, ಪ್ರಗತಿಶೀಲ, ನವ್ಯ, ಬಂಡಾಯ ಮತ್ತು ದಲಿತ ಸಾಹಿತ್ಯವೆಂದು ಸಾಮಾನ್ಯವಾಗಿ ವಿಂಗಡಿಸಲಾಗುತ್ತದೆ.

ನವೋದಯ ಕಾಲಘಟ್ಟದ ಆರಂಭವನ್ನು ವಿದ್ಯುಕ್ತವಾಗಿ ಉದ್ಘಾಟಿಸಿದ ಕೃತಿಯೆಂದರೆ ಬಿ.ಎಂ. ಶ್ರೀ ಅವರ 'ಇಂಗ್ಲೀಷ್ ಗೀತೆಗಳು'. ಇದರಲ್ಲಿ ಇಂಗ್ಲೀಷ್ ರೊಮ್ಯಾಂಟಿಕ್ ಸಂಪ್ರದಾಯದ ಕವಿಗಳಾದ ವರ್ಡ್ಸ್‌ವರ್ತ್, ಷೆಲ್ಲಿ, ಬರ್ನ್ಸ್, ಬ್ರೌನಿಂಗ್, ಟೆನಿಸನ್, ಸ್ಕಾಟ್, ಬೈರನ್ ಹಾಗೂ ಶೇಕ್ಸಪಿಯರ್ ಮುಂತಾದವರ ಕವನಗಳು ಸೇರಿವೆ. ಅದೇ ಸಮಯಕ್ಕೆ ಗೋವಿಂದ ಪೈ, ಡಿ.ವಿ.ಗುಂಡಪ್ಪ, ಮಾಸ್ತಿ ವೆಂಕಟೇಶ ಅಯ್ಯಂಗಾರ್, ದ.ರಾ.ಬೇಂದ್ರೆ, ಕೆ.ವಿ.ಪುಟ್ಟಪ್ಪ, ಪು.ತಿ.ನರಸಿಂಹಾಚಾರ್, ವೀ. ಸೀತಾರಾಮಯ್ಯ, ಕೆ.ಎಸ್. ನರಸಿಂಹಸ್ವಾಮಿ, ಗೋಪಾಲಕೃಷ್ಣ ಅಡಿಗ, ಚೆನ್ನವೀರ ಕಣವಿ, ಜಿ.ಎಸ್. ಶಿವರುದ್ರಪ್ಪ, ಜಿ.ಪಿ.ರಾಜರತ್ನಂ, ತೀ.ನಂ.ಶ್ರೀಕಂಠಯ್ಯ, ವಿ.ಕೃ.ಗೋಕಾಕ್ ಇನ್ನು ಮುಂತಾದ ಹಲವಾರು ಪ್ರತಿಭಾವಂತ ಕವಿಗಳ ಪಡೆ ಕಾವ್ಯ ಪ್ರಕಾರದಲ್ಲಿ ಹೊಸ ಹೊಸ ಪ್ರಯೋಗಗಳನ್ನು ಮಾಡುತ್ತಿದ್ದರು. ಆಶಾವಾದಿತನ, ಜೀವನೋತ್ಸಾಹ, ಪ್ರಕೃತಿ ಪ್ರೇಮ, ಅಧ್ಯಾತ್ಮಿಕತೆ, ಆದರ್ಶವಾದ ಮನೋವೃತ್ತಿ ಮತ್ತು ಕನಸುಗಾರಿಕೆ ಮುಂತಾದ ಧೋರಣೆಗಳನ್ನು ಈ ಸಾಹಿತ್ಯ ಹೊಂದಿತ್ತು. ಮನುಷ್ಯನ ಭಾವನೆಗಳು, ಆಸೆಗಳು ಕನಸುಗಳು, ಪ್ರಕೃತಿಯಲ್ಲಿ ಬೆರಗು, ಕುತೂಹಲ, ಊಹೆ, ಮನುಷ್ಯ-ಮನುಷ್ಯರ ಸಂಬಂಧ, ಸಮಾಜದಲ್ಲಿ ಮನುಷ್ಯ, ಕುಟುಂಬದಲ್ಲಿ ಮನುಷ್ಯ, ಸ್ನೇಹ, ಪ್ರೀತಿ, ದ್ವೇಷ ಹೀಗೆ ಎಲ್ಲವೂ ಇದರ ವಸ್ತುವಾಗಿದ್ದು " ಇಹಲೋಕದ ಬಾಳು ಪರಲೋಕಕ್ಕೆ ದಾರಿ ಮಾತ್ರವಲ್ಲ, ಈ ಲೋಕದ ಬಾಳಿನಲ್ಲೇ ಇದಕ್ಕೆ ತೀವ್ರ ಆಸಕ್ತಿ" ಎಂಬ ಮೌಲ್ಯಗಳಿಗೆ ಒತ್ತು ನೀಡಿತು.

೧೯೪೫ರ ಸುಮಾರಿಗೆ ಅಖಿಲ ಭಾರತದಲ್ಲಿ ಹೊಸದೊಂದು ಗಾಳಿ ಬೀಸಲಾರಂಭಿಸಿತು. ಈ ಗಾಳಿಯಲ್ಲಿ ಉಸಿರಾಡಿ ಇದರಿಂದ ಚೇತನ ಪಡೆದವರು ತಮ್ಮನ್ನು 'ಪ್ರಗತಿಶೀಲರು' ಎಂದು ಕರೆದುಕೊಂಡರು. ಈ ಕಾಲದ ಸಾಹಿತಿಗಳು "ಸಾಹಿತ್ಯ ವಾಸ್ತವಿಕತೆಗೆ ಮುಸುಕನ್ನು ಹಾಕಬಾರದು, ಸಾಮಾಜಿಕ ಕ್ರಾಂತಿಯ ವಜ್ರಾಯುಧವಾಗಬೇಕು ಎಂಬ ತಮ್ಮ ದೃಷ್ಟಿಗೆ ಅನುಗುಣವಾಗಿ ಸಣ್ಣಕಥೆಗಳನ್ನು ಕಾದಂಬರಿಗಳನ್ನು ಬರೆದರು".[೩] ಅ.ನ.ಕೃ. ತ.ರ.ಸುಬ್ಬರಾವ್, ಕುಮಾರ ವೆಂಕಣ್ಣ, ಅರ್ಚಕ ವೆಂಕಟೇಶ, ಬಸವರಾಜ ಕಟ್ಟೀಮನಿ, ನಿರಂಜನ, ಅನಂತನಾರಾಯಣ ಮೊದಲಾದವರು ಪ್ರಗತಿಶೀಲ ತತ್ವಗಳಿಗನುಗುಣವಾಗಿ ಬರೆದರು. ಕ್ರಾಂತಿಯಿಂದ ಮಾತ್ರ ಶಾಂತಿ ಸ್ಥಾಪಿಸಲು ಸಾಧ್ಯ ಎಂಬುದನ್ನು ನಂಬಿದ ಈ ಸಾಹಿತ್ಯ ಧರ್ಮ, ಜಾತಿ ಹಾಗೂ ದೇವರುಗಳ ಹೆಸರಿನಲ್ಲಿ ನಡೆಯುವ ಶೋಷಣೆಯನ್ನು ಧಿಕ್ಕರಿಸಿತು. ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯವಾಗಿ ಶೋಷಣೆಗೆ ಒಳಗಾಗಿರುವ ಸ್ತ್ರೀ ಸಮಾಜದ ಏಳ್ಗೆಯನ್ನು ಬಯಸಿತು. ಹೀಗೆ ಅನೇಕ ಧ್ಯೇಯ ಧೋರಣೆಗಳನ್ನೊಳಗೊಂಡ ಪ್ರಗತಿಶೀಲ ಸಾಹಿತ್ಯ ಕಾವ್ಯ ಪ್ರಕಾರಕ್ಕೆ ಗಮನ ಕೊಡದಿದ್ದರೂ ಕಾದಂಬರಿ, ಸಣ್ಣಕಥೆ ಕ್ಷೇತ್ರದಲ್ಲಿ ಗಮನಾರ್ಹ ಸಾಧನೆ ನಡೆಸಿದ್ದಾರೆ.

ನವ್ಯ ಸಾಹಿತ್ಯ ಆಧುನಿಕ ಕನ್ನಡ ಸಾಹಿತ್ಯದ ಒಂದು ಬಹುಮುಖ್ಯ ಸಾಹಿತ್ಯ ಪಂಥ. ೧೯೫೦ರ ನಂತರವೇ ಕನ್ನಡ ಸಾಹಿತ್ಯದಲ್ಲಿ 'ನವ್ಯತೆ' ಕಾಣಿಸಿಕೊಳ್ಳಲು ಆರಂಭವಾದದ್ದು. ನವ್ಯ ಸಾಹಿತ್ಯದ ಮೇಲೆ ಪಾಶ್ಚಿಮಾತ್ಯರ ಸಂಕೇತವಾದ ಮತ್ತು ಪ್ರತಿಮಾವಾದ, ಅಸ್ತಿತ್ವವಾದ, ಅಸಂಗತವಾದ, ಮನೋವಿಶ್ಲೇಷಣಾತ್ಮಕ ವಿಧಾನ ಇವುಗಳ ಪ್ರೇರಣೆ ಮತ್ತು ಪ್ರಭಾವ ಉಂಟಾಗಿದೆ. 'ಕನ್ನಡ ನವ್ಯ ಸಾಹಿತ್ಯದ ಹರಿಕಾರ' ಎಂದು ಹೆಸರು ಪಡೆದ ಕವಿ ಎಂ.ಗೋಪಾಲಕೃಷ್ಣ ಅಡಿಗರು ೧೯೫೨ ರಲ್ಲಿ

ಪ್ರಕಟವಾದ ತಮ್ಮ 'ನಡೆದುಬಂದ ದಾರಿ' ಸಂಕಲನಕ್ಕೆ ಬರೆದ ಮುನ್ನುಡಿಯಲ್ಲಿ ನವ್ಯ ಕಾವ್ಯದ ಅನಿವಾರ್ಯತೆಯನ್ನು ಕುರಿತು ಹೇಳಿದ್ದಾರೆ.

ನವ್ಯ ಸಾಹಿತ್ಯ ಮನುಷ್ಯನ ಆತ್ಮನಿಷ್ಠತೆ, ಮಾನಸಿಕ ಸಂಘರ್ಷ, ಭಯ, ಬೀಭತ್ಸತೆ, ದ್ವಂದ್ವತೆ, ಸಿನಿಕತನ, ಏಕಾಂಗಿತನ, ನಿರಾಸೆ, ಪರಕೀಯತೆ ಇನ್ನು ಮುಂತಾದ ಸಂಕೀರ್ಣತೆಗಳ ಮುಖವಾಣಿಯಾಯಿತು. ವಾಸ್ತವದ ತೀವ್ರ ಹಂಬಲದ ಮೂಲಕ ನಾಸ್ತಿಕತೆಗೆ ಹೆಚ್ಚು ಒತ್ತು ಕೊಟ್ಟಿತು. ಭಾಷೆಯ ಸೂಕ್ಷ್ಮತೆ, ಕಲಾತ್ಮಕತೆ, ವ್ಯಂಗ್ಯ, ಧ್ವನಿ ಸಾಂಕೇತಿಕತೆಗಳನ್ನು ಬಳಸಿ ಆ ಮೂಲಕ ಬದುಕಿನ ಸಂಕೀರ್ಣಾನುಭವಗಳನ್ನು ಶೋಧಿಸುವ ಪ್ರಯತ್ನ ಮಾಡಿದರು.

ಗೋಪಾಲ ಕೃಷ್ಣ ಅಡಿಗರ 'ಕೃಷ್ಣನ ಕೊಳಲು', 'ಹಿಮಗಿರಿಯ ಕಂದರ' ಮುಖ್ಯವಾದವು. ಬಿ.ಸಿ.ರಾಮಚಂದ್ರ ಶರ್ಮರ 'ಏಳು ಸುತ್ತಿನ ಕೋಟೆ', 'ಹೇಸರಗತ್ತೆ' ಮೊದಲಾದ ನವ್ಯ ಕಾವ್ಯ ಸಂಕಲನಗಳನ್ನು ಪ್ರಕಟಿಸಿದರು. ಲೈಂಗಿಕ ವಿಷಯಗಳನ್ನು ಕಾವ್ಯವಸ್ತುವನ್ನಾಗಿ ಪ್ರಯೋಗಿಸಿದ ವೈಶಿಷ್ಟ್ಯ ಶರ್ಮರದು ಗಂಗಾಧರ ಚಿತ್ತಾಲ, ಶಂಕರ ಮೊಕಾಶಿ ಪುಣೇಕರ, ಸು.ರಂ. ಎಕ್ಕುಂಡಿ, ಪಿ.ಲಂಕೇಶ್, ಯು.ಆರ್. ಅನಂತಮೂರ್ತಿ, ಶ್ರೀ ಕೃಷ್ಣ ಆಲನಹಳ್ಳಿ ಮುಂತಾದವರು ನವ್ಯ ಕಾವ್ಯದ ಪ್ರಮುಖ ಕವಿಗಳಾಗಿದ್ದಾರೆ.

ದಲಿತ-ಬಂಡಾಯ ಸಾಹಿತ್ಯವು ಒಂದು ಚಳುವಳಿಯಾಗಿ ಆರಂಭವಾದದ್ದು ೧೯೭೦ರ ಉತ್ತರಾರ್ಧದಲ್ಲಿ. ದಲಿತ-ಬಂಡಾಯ ಸಾಹಿತ್ಯಕ್ಕೆ ಮಾರ್ಕ್ಸವಾದ, ಲೋಹಿಯಾವಾದ, ಅಂಬೇಡ್ಕರ್‌ವಾದ, ಹಾವನೂರರ ವರದಿ, ಬಸವಲಿಂಗಪ್ಪನವರ ಬೂಸಾ ಪ್ರಕರಣ, ಜಾತಿವಿನಾಶ ಸಮ್ಮೇಳನ ಮುಂತಾದ ಸಾಹಿತ್ಯೇತರ ಅಂಶಗಳು ಮತ್ತು ತೆಲುಗಿನ ದಿಗಂಬರ ಕಾವ್ಯ, ಮರಾಠಿ ದಲಿತ ಸಾಹಿತ್ಯ ಚಳುವಳಿ ಮತ್ತು ಆಫ್ರಿಕಾದ ಕಪ್ಪು ಸಾಹಿತ್ಯ ಚಳುವಳಿ ಮುಂತಾದ ಅಂಶಗಳು ಪ್ರಭಾವ ಬೀರಿದವು.

ದಲಿತ-ಬಂಡಾಯ ಸಾಹಿತ್ಯದಲ್ಲಿ ಜನಪ್ರಿಯವಾದ ಸಾಹಿತ್ಯ ಪ್ರಕಾರಗಳೆಂದರೆ ಕಥೆ ಮತ್ತು ಕಾವ್ಯ. ೧೯೭೫ ರಲ್ಲಿ ಪ್ರಕಟವಾದ ಸಿದ್ದಲಿಂಗಯ್ಯನವರ 'ಹೊಲೆಮಾದಿಗರ ಹಾಡು' ಹೊಸ ಬಗೆಯ ಭಾಷೆ, ರೊಚ್ಚು ಆವೇಶಗಳೊಂದಿಗೆ ಪ್ರಕಟವಾಗಿ ಕನ್ನಡ ಕಾವ್ಯಲೋಕವನ್ನೇ ಅಲ್ಲಾಡಿಸಿತು. ಎಚ್.ಗೋವಿಂದಯ್ಯ, ಇಂದೂಧರ ಹೊನ್ನಾಪುರ, ಚನ್ನಣ್ಣ ವಾಲೀಕಾರ, ಮ.ನ. ಜವರಯ್ಯ ಮುಂತಾದವರು ಶ್ರೇಷ್ಠ ಕವಿಗಳಾಗಿದ್ದಾರೆ.

ಸ್ತ್ರೀ ಸಂವೇದನೆಯ ಹಿನ್ನೆಲೆಯಲ್ಲಿ ಮಹಿಳಾ ಸಾಹಿತ್ಯ ಕೂಡ ಗಮನಾರ್ಹ ಬೆಳವಣಿಗೆಯನ್ನು ಹೊಂದುತ್ತಿರುವುದನ್ನು ಗಮನಿಸಬಹುದು. ಮಹಿಳೆಯರ ಕಾವ್ಯದಲ್ಲಿಯೂ ಭಾವಗೀತಾತ್ಮಕತೆ ಬದುಕಿನ ಪ್ರೀತಿ, ಹೃದಯದ ಕನಸುಗಳು, ಎಲ್ಲವುಗಳ ಮುಕ್ತ ಅಭಿವ್ಯಕ್ತಿಯನ್ನು ಕಾಣಬಹುದು. ಸ.ಉಷಾ, ಎಚ್.ಎಲ್.ಪುಷ್ಪಾ ಸುಕನ್ಯಾ ಮಾರುತಿ, ಬಿ.ಸರ್ವಮಂಗಳ, ಎಂ.ಆರ್.ಕಮಲ, ಡಿ. ವಿಜಯಾ, ಮಾಲತಿ ಪಟ್ಟಣಶೆಟ್ಟಿ, ಭಾಗ್ಯ ಸುದರ್ಶನ, ಹೇಮಾ ಪಟ್ಟಣಶೆಟ್ಟಿ, ಪ್ರತಿಭಾ ನಂದಕುಮಾರ್, ಶಶಿಕಲಾ ವೀರಯ್ಯಸ್ವಾಮಿ ಮುಂತಾದ ಮಹಿಳಾ ಸಾಹಿತಿಗಳನ್ನು ಪ್ರಮುಖವಾಗಿ ಗುರುತಿಸಬಹುದು.

ಸಾಹಿತ್ಯದ ಉದ್ದೇಶ, ಧ್ಯೇಯ, ಧೋರಣೆಯ ಆಧಾರದ ಮೇಲೆ ನವೋದಯ, ಪ್ರಗತಿಶೀಲ, ನವ್ಯ, ಬಂಡಾಯ–ದಲಿತ ಎಂದು ಗುರುತಿಸಲಾಗಿದ್ದು, ಅದರದೇ ಆದ ತತ್ವ ಚಿಂತನೆ, ವಿಚಾರಗಳನ್ನು ಒಳಗೊಂಡ ಕಾವ್ಯವನ್ನು ಅಂದಂದಿನ ಕವಿಗಳು ರಚಿಸುತ್ತಲೇ ಇದ್ದಾರೆ. ಅಷ್ಟೇ ಅಲ್ಲ ಯಾವ ಒಂದು ತತ್ವ ಸಿದ್ಧಾಂತಕ್ಕೂ ಅಂಟಿಕೊಳ್ಳದ ಅನೇಕ ಕವಿಗಳು ತಾವು ಕಂಡುಂಡ ಅನುಭವವೆಲ್ಲವನ್ನು ಕಾವ್ಯವಾಗಿಸುತ್ತಲೇ ಇದ್ದಾರೆ. ಹೀಗೆ ಪಾಶ್ಚಾತ್ಯ ಪ್ರಭಾವ ಮತ್ತು ದೇಶೀಯ ಸಂವೇದನೆಯಿಂದ ಪ್ರೇರಣೆಗೊಂಡ ಆಧುನಿಕ ಕನ್ನಡ ಕಾವ್ಯ ಅಂದಿನಿಂದ ಮೊದಲುಗೊಂಡು ಇಂದಿನವರೆಗೂ ತನ್ನದೇ ಆದ ವಿಶಿಷ್ಟ ವಸ್ತು ವೈವಿಧ್ಯತೆಯಿಂದ ಕೂಡಿ ಬೆಳೆಯುತ್ತಲೇ ನಿರಂತರ ಬದಲಾವಣೆಗೆ ಒಳಗಾಗುತ್ತಿದ್ದು ಹೊಸ ಸೃಷ್ಟಿ ಮತ್ತು ಚೈತನ್ಯಕ್ಕೆ ಕಾರಣವಾಗುತ್ತಿದೆ.

**<u>ಅಡಿ ಟಿಪ್ಪಣಿಗಳು.</u>**

೧. ಹೊಸಗನ್ನಡ ಸಾಹಿತ್ಯ ಚರಿತ್ರೆ– ಎಲ್. ಎಸ್. ಶೇಷಗಿರಿರಾವ್, ಪು. ಸಂ. ೧೯, ಅಂಕಿತ ಪ್ರಕಾಶನ–೨೦೦೮, ಬೆಂಗಳೂರು.

೨. ಹೊಸಗನ್ನಡ ಸಾಹಿತ್ಯ ಚರಿತ್ರೆ– ಎಲ್. ಎಸ್. ಶೇಷಗಿರಿರಾವ್, ಪು. ಸಂ. ೬೩, ಅಂಕಿತ ಪ್ರಕಾಶನ–೨೦೦೮, ಬೆಂಗಳೂರು.

೩. ಸಿಪಿಕೆ ಸಮಗ್ರ ಕವಿತೆ–೧೯೫೫–೨೦೦೦, ಸಂವಹನ ಮೈಸೂರು.

## ಅಧ್ಯಾಯ-೩

# ಸಿಪಿಕೆ ಅವರ ಬದುಕು-ಬರಹ

ಆಧುನಿಕ ಕನ್ನಡ ಸಾಹಿತ್ಯ ಕಂಡ ಶ್ರೇಷ್ಠ ಸಾಹಿತಿಗಳ ಸಾಲಿನಲ್ಲಿ ಸಿ.ಪಿ.ಕೃಷ್ಣಕುಮಾರ್ ಅವರನ್ನು ಗುರುತಿಸುತ್ತೇವೆ. ಕನ್ನಡ ಸಾಹಿತ್ಯಕ್ಕೆ ಅವರ ಸೇವೆ ಅಗಾಧವಾದುದ್ದು ಮತ್ತು ತುಂಬಾ ಮೌಲಿಕವಾದದು. ಅವರ ಮುಖ್ಯ ಆಸಕ್ತಿಗಳು ಕವಿತೆ, ಸಾಹಿತ್ಯ, ವಿಮರ್ಶೆ ಮತ್ತು ಭಾಷಾಂತರಗಳು ಇವುಗಳಲ್ಲದೆ ಗ್ರಂಥ ಸಂಪಾದನೆ, ಚಿಂತನೆ, ಪ್ರಬಂಧ, ಅನ್ಯಭಾಷೆಗಳಿಂದ ಅನುವಾದಿತ ಕೃತಿಗಳು ಮತ್ತು ಇನ್ನೂ ಹಲವು ಹತ್ತು ಬಗೆಯ ಕೃತಿಗಳನ್ನು ಪ್ರಕಟಿಸಿದ್ದಾರೆ.

**ಜನನ:-** ಸಾಂಸ್ಕೃತಿಕ ನಗರಿ ಎಂದೇ ಖ್ಯಾತವಾಗಿರುವ, ಸಾಹಿತಿಗಳ ತವರೂರು ಮೈಸೂರು ಜಿಲ್ಲೆಯ ಕೆ.ಆರ್.ನಗರ ತಾಲ್ಲೂಕಿನ ಸಾಲಿಗ್ರಾಮ ಹೋಬಳಿಯ ಚಿಕ್ಕನಾಯಕನ ಹಳ್ಳಿ ಎಂಬ ಗ್ರಾಮದಲ್ಲಿ ಶ್ರೀ ಪುಟ್ಟೇಗೌಡ ಹಾಗೂ ಶ್ರೀಮತಿ ಚಿಕ್ಕಮ್ಮ ದಂಪತಿಗಳ ಪುತ್ರನಾದ ಡಾ॥ ಸಿ.ಪಿ.ಕೃಷ್ಣಕುಮಾರ್ ಅವರು ೧೯೩೯ ಏಪ್ರಿಲ್ ೮ ರಂದು ಜನಿಸಿದರು ಚಿಕ್ಕ ಮಗುವಾಗಿರುವಾಗಲೇ ತಾಯಿಯ ವಾತ್ಸಲ್ಯದಿಂದ ವಂಚಿತರಾಗಿ ಅಜ್ಜಿ ಮತ್ತು ಸೋದರತ್ತೆಯ ಆರೈಕೆಯಲ್ಲಿ ಬೆಳೆದರು.

ತೀಕ್ಷ್ಣಮತಿಗಳಾಗಿದ್ದ ಸಿಪಿಕೆ ಅವರು ಬಾಲ್ಯದಿಂದಲೇ ಓದಿನಲ್ಲಿ ಆಸಕ್ತಿ ಬೆಳೆಸಿಕೊಂಡಿದ್ದರು. ಪ್ರಾಥಮಿಕ ಶಾಲೆಯ ಗ್ರಂಥ ಭಂಡಾರ ಸಾಹಿತ್ಯಾಸಕ್ತಿಯನ್ನು ಬೆಳೆಸುವಲ್ಲಿ ಪ್ರಮುಖವಾದ ಪಾತ್ರವಹಿಸಿತು. ಅಲ್ಲಿಗೆ ಬರುತ್ತಿದ್ದ 'ಪುಸ್ತಕ ಪ್ರಪಂಚ', 'ಪ್ರಜಾಮತ' ಅವರ ಅಚ್ಚುಮೆಚ್ಚಿನ ಪತ್ರಿಕೆಗಳಾಗಿದ್ದವು. "ಪ್ರೌಢಶಾಲೆಯಲ್ಲಿದ್ದಾಗಲೇ ಆಂಗ್ಲ ಪಠ್ಯ ಪುಸ್ತಕದಲ್ಲಿದ್ದ ಕವನವನ್ನು ಕನ್ನಡಕ್ಕೆ ಭಾಷಾಂತರಿಸಿದೆ". ಎಂದು ನೆನಪು ಮಾಡಿಕೊಳ್ಳುವುದರ ಮುಖೇನ "ಇದೇ ನನ್ನ ಪ್ರಥಮ ಸಾಹಿತ್ಯ ರಚನೆ" ಎಂದು ಸ್ಮರಿಸಿಕೊಳ್ಳುತ್ತಾರೆ".' ಇದು ಬೃಹತ್‌ವೃಕ್ಷವೊಂದಕ್ಕೆ ಬೀಜಾಂಕುರವೆಂದು ಹೇಳಬಹುದು.

ಸಿ.ಪಿ.ಕೆ ಅವರು ಬದುಕಿನಲ್ಲಿ ದಾರಿದ್ರ್ಯದ ದಿನಗಳನ್ನು ಎದುರಿಸಿದ್ದಾರೆ ಅವರ ವಿಧ್ಯಾಭ್ಯಾಸಕ್ಕೆ ಆಸರೆಯಾಗಿ ನಿಂತವರು ನಾಡೋಜ ಪ್ರೋ.ದೇಜಗೌ. ಸಿ.ಪಿ.ಕೆಯವರು ಅವರ ಬಗ್ಗೆ "ದೇಜಗೌ ವ್ಯಕ್ತಿ ಮತ್ತು ಶಕ್ತಿ" ಎಂಬ ಕೃತಿಯನ್ನೇ ರಚಿಸಿದ್ದಾರೆ. ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಬಿ.ಎ. ಆನರ್ಸ್ ಪದವಿಯನ್ನು ೧೯೬೦ ರಲ್ಲಿ ಪಡೆದರು. ಎಂ.ಎ ಪದವಿಯನ್ನು ಪ್ರಥಮ ದರ್ಜೆ ಮತ್ತು ಪ್ರಥಮ ಶ್ರೇಣಿಯಲ್ಲಿ ಪಡೆಯುತ್ತಾರೆ. ತೀ.ನಂ.ಶ್ರೀ ಅವರ ಶಿಷ್ಯರಾದದ್ದು ಅವರ ಸಾರಸತ್ವ ಬೆಳವಣಿಗೆಗೆ ಸ್ಫೂರ್ತಿ ನೀಡಿತು. ೧೯೭೪ ರಲ್ಲಿ 'ನಾಗವರ್ಮನ ಕರ್ನಾಟಕ ಕಾದಂಬರಿ; ಒಂದು ತೌಲನಿಕ ಮತ್ತು ವಿಮರ್ಶಾತ್ಮಕ ಅಧ್ಯಯನ' ಎಂಬ ಮಹಾಪ್ರಬಂಧಕ್ಕೆ ಮೈಸೂರು ವಿಶ್ವವಿದ್ಯಾನಿಲಯದಿಂದ ಪಿ.ಎಚ್.ಡಿ. ಪದವಿಯನ್ನು ಪಡೆದರು. ಭಾರತೀಯ ವಿದ್ಯಾಭವನದ ಸಂಸ್ಕೃತ ಕೋವಿದ ಪದವಿಯನ್ನು ಪಡೆದಿದ್ದಾರೆ.

ಸಿ.ಪಿ.ಕೆ. ಅವರು ೧೯೬೧ ರಲ್ಲಿ ಮೈಸೂರು ಪ್ರಜಾ ವಿದ್ಯಾ ಸಂಶೋಧನಾಲಯದಲ್ಲಿ ಸಂಶೋಧನಾ ಸಹಾಯಕರಾಗಿ ನೇಮಕಗೊಂಡು ಮೂರು ವರ್ಷಗಳ ಕಾಲ ಸೇವೆ ಸಲ್ಲಿಸುತ್ತಾರೆ.

ಅನಂತರ ಮೈಸೂರು ವಿ.ವಿ.ಯ ಮಹಾರಾಜ ಕಾಲೇಜಿನಲ್ಲಿ ಮೂರು ವರ್ಷಗಳ ಕಾಲ ಕನ್ನಡ ಅಧ್ಯಾಪಕರಾಗಿ, ಅನಂತರ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಪ್ರವಾಚಕರಾಗಿ, ಪ್ರಾಧ್ಯಾಪಕರಾಗಿ, ನಿರ್ದೇಶಕರಾಗಿ ಸೇವೆ ಸಲ್ಲಿಸಿದರು. ೧೯೯೯–೨೦೦೦ ದಲ್ಲಿ ಕುವೆಂಪು ಕಾವ್ಯಾಧ್ಯಯನ ಪೀಠದ ಸಂದರ್ಶಕ ಪ್ರಾಧ್ಯಾಪಕರಾಗಿಯೂ ಸೇವೆ ಸಲ್ಲಿಸಿದ್ದಾರೆ.

ಕನ್ನಡ ಭಾಷೆಯ ಅಭಿಮಾನಿಗಳಾದ ಸಿ.ಪಿ.ಕೆ ಅವರ ಭಾಷಾ ಪಾಂಡಿತ್ಯ ಕನ್ನಡ, ಇಂಗ್ಲೀಷ್, ಸಂಸ್ಕೃಗಳದ್ದು. ಸಿ.ಪಿ.ಕೆ ಅವರು ಪ್ರಕಾಶಕರೂ ಹೌದು ಎಂಬುದು ಗಮನಿಸಬೇಕಾದ ಅಂಶ, 'ಚಿತ್ರಭಾನು' ಪ್ರಕಾಶನ ಸಂಸ್ಥೆಯನ್ನು ಸ್ಥಾಪಿಸಿ ಎಪ್ಪತ್ತಕ್ಕಿಂತ ಹೆಚ್ಚು ಕೃತಿಗಳನ್ನು ಪ್ರಕಟಿಸಿದ್ದಾರೆ.

ಸಿ.ಪಿ.ಕೆ ಅವರು ಹಳಗನ್ನಡ ಸಾಹಿತ್ಯ ವಿಮರ್ಶೆ, ನಡುಗನ್ನಡ ಸಾಹಿತ್ಯ ವಿಮರ್ಶೆ, ಹೊಸಗನ್ನಡ ಸಾಹಿತ್ಯ ವಿಮರ್ಶೆ, ಸಂಶೋಧನೆ ಮತ್ತು ತೌಲನಿಕ ವಿಮರ್ಶೆ, ಗ್ರಂಥ ಸಂಪಾದನೆ, ಸಂಸ್ಕೃತದಿಂದ ಮತ್ತು ಇಂಗ್ಲೀಷ್‌ನಿಂದ ಭಾಷಾಂತರ, ಜೀವನಚಿತ್ರಗಳು, ಪ್ರಬಂಧಗಳು, ಕಾವ್ಯ–ಹೀಗೆ ಸಾಹಿತ್ಯದ ಅನೇಕ ಪ್ರಕಾರಗಳಲ್ಲಿ ಕೃಷಿ ಮಾಡಿದ್ದಾರೆ, ವಿದ್ಯಾರ್ಥಿಗಳಿಗೆ, ಅಧ್ಯಾಪಕರಿಗೆ ಇವರ ಕೃತಿಗಳು ಪರಾಮರ್ಶನ ಕೃತಿಗಳಾಗಿವೆ. ಸಂಖ್ಯೆಯಲ್ಲೂ ಸತ್ವದಲ್ಲೂ ಹಿರಿಯ ಮಹತ್ವವಿದೆ. ಡಾ.ಡಿ.ಬಿ. ರಾಮಚಂದ್ರಾಚಾರ್ ಅವರು ಸಿ.ಪಿ.ಕೆ ಅವರನ್ನು 'ಸಾಹಿತ್ಯ ಲೋಕದ ಗವಾಸ್ಕರ್' ಎಂದಿರುವುದು ಔಚಿತ್ಯಪೂರ್ಣವಾಗಿದೆ.

### ಡಾ.ಸಿ.ಪಿ.ಕೆ ಅವರಿಂದ ರಚಿಸಲ್ಪಟ್ಟ ಕೃತಿಗಳು

**ಕಾವ್ಯ :** ಅಂತರತಮ, ಅನಂತ ಪೃಥ್ವೀ, ಆಯ್ದ ನೂರೊಂದು ಕವನ, ಒಳದನಿ, ಕಣ ಕ್ಷಣ, ಕನವರಿಕೆ, ಕನ್ನಡಿಯ ಕಿಚ್ಚು, ಕಾರಣಿಕ ವಚನಗಳು, ಚಿಕ್ಕೆ ಚೂರು, ಚೋದ್ಯ ಕುಚೋದ್ಯ, ತಾರಾಸಖ, ತೊಟ್ಟುಗಳು, ನೀವೆ ನಮಗೆ ದಿಕ್ಕು, ನೂರೊಂದು, ಪ್ರಕೃತಿ, ಪರ್ಯಾಯ, ಬಿಂದು ಬೆರಗು, ಬೊಗಸೆ, ವಚನ ನಿವೇದನ, ವಚನ ಮಾಚದ ಮನ, ವಚನ ವಿಜ್ಞಾಪನ, ಮುಕ್ತಕ ಮುಕುರ, ಮುಕ್ತಹಾರ, ಲಯವಿಲ್ಲದ ಬದುಕು, ವರ್ತಮಾನ, ವ್ಯಾಸಭಾಗ್ಯ, ಶರದದ ಮುಗಿಲು, ಸರಾಗ, ಸಾನೆಟ್ಸಾಲು, ಸಿಪಿಕೆ ಚುಟುಕುಗಳು, ಸಿ.ಪಿ.ಕೆ ಸಮುದ್ರ ಕವಿತೆ, ಸುನೀತಶತ, ಹನಿಮಿನಿ, ಕವಿತೆ ನಿಲ್ಲುವುದಿಲ್ಲ ಇತ್ಯಾದಿ.

**ಪ್ರಬಂಧಗಳು:** ಕೋಲ್ಮಿಂಚು, ಚಿಂತನಚಯ, ಚಿಂತನಬಿಂದು, ಜಾಜಿಮಲ್ಲಿಗೆ, ದೀಪಸ್ಮಿತ, ನವನೀತ, ಬಿಗುಲಘು, ಮಣಿಗಣಿ, ಮೆಲಕು, ವಿಚಾರ, ನಿಮಿಷ, ಸೂಜಿಮಲ್ಲಿಗೆ, ಹರಳು, ಹಳುಕು, ಹೇಮಧೂಳಿ ಇತ್ಯಾದಿ.

**ವಿಚಾರ, ವಿಮರ್ಶೆ, ಸಂಶೋಧನೆ :** ಅಧ್ಯಯನ, ಆಲೋಚನೆ, ಉಪಚಯ, ಎರಡು ಜೈನ ಪುರಾಣಗಳು, ಐದು ವಚನಕಾರರು, ಕನಕ: ಕೆಲವು ಮುಖ, ಕನ್ನಡ ಕಾವ್ಯ: ಹತ್ತು ವರುಷ, ಕನ್ನಡದ ಕಾರಣ, ಕನ್ನಡ ಚತುರ್ಮುಖ, ಕನ್ನಢ ಸಾಹಿತ್ಯದ ಮೇಲೆ ಇಂಗ್ಲೀಷ್ ಪ್ರಭಾವ, ಕನ್ನಡ ಸಂಸ್ಕೃತ ಸಂಬಂಧ, ಕರ್ನಾಟಕ ಕಾದಂಬರಿ: ಒಂದು ಕಾಲ್ಪನಿಕ ಮತ್ತು ವಿಮರ್ಶಾತ್ಮಕ ಅಧ್ಯಯನ, ಕಲಾಪ, ಕವಿರಾಜಮಾರ್ಗದ ಕಾವ್ಯವಿಮಾಂಸೆ, ಕಾವ್ಯಕರ್ಷಣ, ಕಾವ್ಯತತ್ವ : ಕೆಲವು ಮುಖಗಳು, ಕಾವ್ಯ ವಿವೇಕ, ಕಾವ್ಯ ಗೌರವ, ಕಾವ್ಯಾರಾಧನ, ಕಾವ್ಯಾಲಾಪ, ಕಾಳಿದಾಸ ಪ್ರಕಾಶ, ಕುಮಾರವ್ಯಾಸ

ಭಾರತ: ಒಂದು ನೋಟ, ಕುಮಾರವ್ಯಾಸ ಸಮೀಕ್ಷೆ, ಕುವೆಂಪು ಕಾವ್ಯಮೀಮಾಂಸೆ, ಕುವೆಂಪು ಕಿರಣಗಳು, ಕುವೆಂಪು ಸಾಹಿತ್ಯ : ಕೆಲವು ಮುಖಗಳು ೧, ಕುವೆಂಪು ಸಾಹಿತ್ಯ : ಕೆಲವು ಮುಖಗಳು ೨, ಕುವೆಂಪು ಸಾಹಿತ್ಯ ಸಂಧಾನ, ಕುವೆಂಪು ಸಾಹಿತ್ಯಲೋಕ, ಗದಾಯುದ್ಧ ಸಮೀಕ್ಷೆ, ಛಂದಸ್ಸು; ಮೂರು ನೋಟ, ಗೋವಿಂದ ಪೈ; ಎರಡು ನೋಟ, ಜನ್ನ, ಜನ್ನ ಮತ್ತು ಅವನ ಕೃತಿಗಳು, ಜೈನ ಸಾಹಿತ್ಯ; ಕೆಲವು ಮುಖಗಳು, ಟಾಲ್ಸ್ಟಾಯ್ ಕಲಾಮೀಮಾಂಸೆ, ತೀನಂಶ್ರೀ; ತ್ರಿಮುಖ, ದೇಜಗೌ; ವ್ಯಕ್ತಿ ಮತ್ತು ಕೃತಿ, ನಾಗಚಂದ್ರ, ನಾಗಚಂದ್ರ ಸಮೀಕ್ಷೆ, ನೂರಾರು ವಿಮರ್ಶೆಗಳು, ಪಂಪ; ಕೆಲವು ಮುಖಗಳು, ಪಂಪ ಪರಿಶೀಲನ, ಪರಾಮರ್ಶೆ, ಪರಿಚಿಂತನೆ, ಪರಿಭಾವ, ಪರಿವೀಕ್ಷಣೆ, ಪರ್ಯಾಲೋಚನೆ, ಪುತಿನ ಕಾವ್ಯ ಮೀಮಾಂಸೆ, ಬರೆದ ಭಾಷಣಗಳು, ಬಸವ ಭಾವನೆ, ಬೇಂದ್ರೆ; ನಾಲ್ಕು ನೋಟ, ಭಕ್ತಿ ಕವಿ ಬಸವಣ್ಣ, ಭಾಸ್ಕರ ಕವಿ, ಮಾಸ್ತಿ; ಕೃತಿ ಚತುರ್ಮುಖ, ಮುಕ್ತರ ಮನನ, ಮುನ್ನುಡಿ ಮಾಲೆ, 'ಮೂರು ಭಾರತ, ಎರಡು ಪರ್ವ', ಯಶೋಧರ ಚರಿತಂ; ಒಂದು ಸಮೀಕ್ಷೆ, ರಂಗಣ್ಣ ಎಸ್.ವಿ, ರನ್ನ, ರನ್ನಪರೀಕ್ಷೆ, ವಚನ ವಿಲೋಕನ, ವಚನ ವಿವೇಚನ, ವಚನ ವಿಹಾರ, ವಿಭೂತಿ ವಿಭಾವನೆ, ಶಾಸನ ಶಾಸ್ತ್ರ ಪ್ರವೇಶ, ಶೋಧನೆ, ಶ್ರೀ ರಾಮಾಯಣ ದರ್ಶನಂ, ಶ್ರೀರಾಮಕೃಷ್ಣರು ಮತ್ತು ಯುಗಧರ್ಮ, ಶ್ರೀ ಸಾಮಾನ್ಯ ಮತ್ತು ಭಗವದ್ಗೀತೆ, ಶ್ರೀ ಸಾಹಿತ್ಯ ಸಿರಿ, ಷಷ್ಠಿ ಲೇಖ, ಸಪ್ತಸಮಾಲೋಕ, ಸಭಾಪರ್ವ ಸಂತುಲನ, ಸಮಾವೇಶ, ಸಮಾಹಾರ, ಸಮ್ಮೇಳನ, ಸಾಹಿತ್ಯ ಮನನ, ಸಾಹಿತ್ಯ ಶೀಲನ, ಸಾಹಿತ್ಯ ಶೈಲಗಳು, ಸಾಹಿತ್ಯ ಸಂಗತಿ, ಸೀಮಾ ಪುರುಷರು, ಹತ್ತು ಹೊತ್ತಗೆಗಳು, ಹನ್ನೆರಡು ಶತಮಾನದ ಕರ್ನಾಟಕ, ಹರಿಹರ ಪರಿಭಾವನೆ ಇತ್ಯಾದಿ.

**ಭಾಷಾಂತರ: ಇಂಗ್ಲೀಷನಿಂದ (ಸೃಜನಶೀಲ):** ಅಗಮೆಮ್ನನ್, ಈಸ್ಕಿಲಸ್‌ನ ಎರಡು ನಾಟಕಗಳು, ಗೀತಾಂಜಲಿ. ಠಾಕೂರ್ ವಚನಾಂಜಲಿ, ತಾಯಿ, ನಿಶ್ಯಬ್ದದಲ್ಲಿ ಕವಿ ನೋವಿನ ದೇವತೆಗೆ, ಪುರಾತನ ನಾವಿಕ, ಫಿಲೋಕ್ಟೆಟಸ್, ಮೀಡಿಯಾ, ಹನ್ನೊಂದು ಹೊರಗಿನ ಕತೆಗಳು, ಹಿಪ್ಪೋಲಿಟಿಸ್, ಹೆಲೆನ್, ಇತಿಹಾಸ ಪುರಾಣಗಳು, ಎಲಿಯಟ್‌ನ ಮೂರು ಉಪನ್ಯಾಸಗಳು, ಕಲಾತತ್ವ, ಕಲೆ ಎಂದರೇನು?, ಕಾವ್ಯ ವಿಚಾರಸಾರ, ಗಾಂಧಿ ಮತ್ತು ಕಲೆ, ಗಾಂಧಿ ಕಾಣ್ಕೆ, ಪಂಡಿತ ಗೋವಿಂದ ವಲ್ಲಭ ಪಂತ್; ವಿಚಾರಧಾರೆ, ಪಾಶ್ಚಾತ್ಯ ಕಾವ್ಯ ಚಿಂತನೆ, ಪಾಶ್ಚಾತ್ಯ ವಿಮರ್ಶೆ; ಪಂಚಮುಖ, ಪ್ರೇಮತತ್ವ, ಭಾರತೀಯ ಶಾಸನಶಾಸ್ತ್ರ ಪರಿಚಯ, ಭಾಷಾ ಮಾಧ್ಯಮವನ್ನು ಕುರಿತು, ಮಹತ್ ಕಾವ್ಯ ಕಲ್ಪನೆ, ವಿದ್ಯಾಪತಿ, ಸಂಕಲನ ಸಾಹಿತ್ಯ ಪ್ರವೇಶ, ಸಾಹಿತ್ಯ ಮತ್ತು ಮನೋವಿಜ್ಞಾನ, ಸಾಹಿತ್ಯ ವಿಮರ್ಶೆಯ ತತ್ವಗಳು, ಮಹಾತ್ಮ-೮ (ಇತರರೊಡನೆ) ಇತ್ಯಾದಿ.

**ಭಾಷಾಂತರ: ಸಂಸ್ಕೃತದಿಂದ** : ಅಭಿಜ್ಞಾನ ಶಾಕುಂತಲ, ಊರುಭಂಗ, ಕನ್ನಡ ಉತ್ತರರಾಮ ಚರಿತ, ಕನ್ನಡ ಕುಮಾರಸಂಭವ, ಕನ್ನಡ ನಾಗಾನಂದ, ಕನ್ನಡ ಪ್ರಿಯದರ್ಶಿಕಾ, ಕನ್ನಡ ಮಹಾಭಾರತ, ವಿರಾಟಪರ್ವ, ಕನ್ನಡ ಯಶೋಧರ ಚರಿತ, ಕನ್ನಡ ರತ್ನಾವಳಿ, ಕನ್ನಡ ವೇಣಿಸಂಹಾರ, ಕನ್ನಡ ಸೌಂದರ್ಯ ಲಹರಿ, ಕನ್ನಡ ಸ್ವಪ್ನವಾಸದತ್ತ, ಪಂಚರಾತ್ರ, ಬೆಳಕಿನ ಹನಿಗಳು, ಭಾಸನ ಎರಡು ನಾಟಕಗಳು, ಯಶೋಧರ ಚಂದ್ರಮತಿ ಕಥಾನಕ, ರಾಮಾಯಣ: ಬಾಲಕಾಂಡ, ವಿರಾಟಪರ್ವ; ಉತ್ತರ ಪ್ರಸಂಗ, ಶ್ರೀ ಕೃಷ್ಣ ಕರ್ಣಾಮೃತಸಾರ, ಸಂಗ್ರಹ ಭಾಗವತ, ಸಂಗ್ರಹ ಮಹಾಭಾರತ,

ಸಂಗ್ರಹ ರಾಮಾಯಣ, ಧಮ್ಮಪದಸಾರ (ಪಾಳಿಯಿಂದ), ಪುಷ್ಪದಂತನ ಯಶೋಧರ ಚರಿತ (ಪ್ರಾಕೃತದಿಂದ), ಇತ್ಯಾದಿ.

**ಜಾನಪದ:** ಒಗಟು ಮತ್ತು ಗಾದೆ, ಕಾಡಿನ ಹಾಡುಗಳು(ಅನುವಾದ). ಗಂಧದ ಕೋಟೆ ಗಮಗಮ, ಚೆಲುವಯ್ಯ–ವರನಂದಿ, ಚುಂಚನಗಿರಿ(ಸಂ.ಇತರರೊಡನೆ) ಜನಪದಗೀತೆ, ಜನಪದ ಸಾಹಿತ್ಯ ಪ್ರವೇಶಿಕೆ, ಜಾನಪದ ಜಾಗರ, ಜಾನಪದ;ತತ್ವ ಮತ್ತು ಸತ್ವ, ಜಾನಪದ ಪ್ರತಿಭೆ, ಜಾನಪದ ಸರಸ್ವತಿ ಮುತ್ತು ತುಂಬೇವು ಕಣಜಕೆ (ಸಂ. ಇತರರೊಡನೆ), ರಾಜಸ್ಥಾನದ ಜಾನಪದ (ಅನುವಾದ), ಹಬ್ಬಲಿ ಅವರ ರಸಬಳ್ಳಿ (ಸಂಪಾದನೆ) ಇತ್ಯಾದಿ.

**ವ್ಯಕ್ತಿ ಚಿತ್ರ** : ಬಸವೇಶ್ವರ, ರತ್ನತ್ರಯ, ಶ್ರೀರಾಮಕೃಷ್ಣ ಪರಮಹಂಸರು, ಶ್ರೀರಾಮಕೃಷ್ಣ ವಿವೇಕ ಶಾರದಾ, ಶ್ರೀ ಶಾರದಾದೇವಿ, ಸಾಕ್ರಟೀಸ್, ಸ್ವಾಮಿ ವಿವೇಕಾನಂದ, ಹಿರಿಯರ ಗೆರೆಗಳು ಇತ್ಯಾದಿ.

**ಹಾಸ್ಯ, ವಿಡಂಬನ** : ಮಧ್ಯಾಹ್ನದ ನಿದ್ದೆ,

**ಗ್ರಂಥ ಸಂಪಾದನೆ** : ಅರಣ್ಯ ಪರ್ವ, ಅನುಭವ ಮುಕುರಂ ಮತ್ತು ಶಾಸನಗಳು, ಕರ್ನಾಟಕ ಪಂಚತಂತ್ರ, ಜನ್ನ ಸಂಪುಟ, ಯಶೋಧರ ಚರಿತೆ, ಷಟ್ಸ್ಥಲ ಶಿವಾಯಣ (ಇತರರೊಡನೆ), ಹರಿಶ್ಚಂದ್ರ ಸಾಂಗತ್ಯ (ರಾಮರಸ ವಿರೂಪಾಕ್ಷ), ಹರಿಶ್ಚಂದ್ರ ಸಾಂಗತ್ಯ (ಹಲಗ) ಇತ್ಯಾದಿ.

**ಇತರ ಸಂಪಾದನೆ** : ಆಯ್ದ ಕುವೆಂಪು ಕವನಗಳು, ಕನ್ನಡ ಛಂದಸ್ಸಿನ ಚರಿತ್ರೆ ೧, ಕನ್ನಡ ಛಂದಸ್ಸು ಚರಿತ್ರೆ ೨. ಕವಿಶೈಲ, ಕಾಮಳ್ಳಿ, ಕಾವ್ಯನಂದನ, ಕಾವ್ಯಾರಾಮ, ಶ್ರೀಗಂಧ, ಇತ್ಯಾದಿ.

**ಇತರರೊಡನೆ ಸೇರಿ ಮಾಡಿದ ಸಂಪಾದನೆಗಳು** : ಅಂತಃಕರಣ, ಅಮೃತ ಸಂಪುಟ, ಇಕ್ಷುಕಾವೇರಿ, ಕಟ್ಟೀಮನಿ: ಬದುಕು ಬರಹ, ಕನ್ನಡ ಭಾರತಿ ೨, ಕನ್ನಡ ರತ್ನಕೋಶ, ಕನ್ನಡ ವಿಮರ್ಶೆ, ಕುಂಭ, ಗದ್ಯವಿಹಾರ–೨, ಜನ್ನ, ಮಾರ್ಗದರ್ಶಕರು, ಯದುಗಿರಿಯ ವೀಣೆ, ವಚನ ವರ್ತಮಾನ, ಸಹ್ಯಾದ್ರಿ, ಸಂವಹನ ಕಾವ್ಯ, ಸಾಹಿತ್ಯ ವಿಮರ್ಶೆ–೧೯೭೦, ಸಾಹಿತ್ಯ ಸೌಧ, ಸಾಹಿತ್ಯಾರಾಧನೆ, ಸುರನದಿಯ ತೀರ್ಥ, ಸುರುಚಿ: ನೂರು, ಸುವರ್ಣ ಶಿಕ್ಷಣ, ಸ್ವಸ್ತಿ ಇತ್ಯಾದಿ.

**ಮಕ್ಕಳ ಸಾಹಿತ್ಯ** : ಏನು? ಏಕೆ? ಹೇಗೆ?, ಪರಮಹಂಸ ಕಥಾವಳಿ,ಪರಮಹಂಸರ ಕಥೆಗಳು, ಶ್ರೀರಾಮಕೃಷ್ಣರ ಕಥೆಗಳು.

**ಸಂಕೀರ್ಣ:** ಅಹಿಂಸೆ, ಕುಮಾರವ್ಯಾಸನ ಹತ್ತು ಚಿತ್ರಗಳು, ಕುವೆಂಪು ಸಂದರ್ಶನ, ಮಹಾಕವಿಯೊಡನೆ ಮಾತುಕತೆ, ಶೃಂಗಾರ ಲಹರಿ ಇತ್ಯಾದಿ.

**ಸಿ.ಪಿ.ಕೆ. ಅವರಿಗೆ ಸಂದ ಪ್ರಶಸ್ತಿ ಮತ್ತು ಗೌರವ ಸನ್ಮಾನಗಳು.**

ಸಿ.ಪಿ.ಕೆ. ಅವರು ವಿದ್ಯಾರ್ಥಿ ದೆಸೆಯಲ್ಲೇ ತಮ್ಮ ಒಂದು ಕವಿತೆಗೆ ಶ್ರೀಯವರ ರಜತೋತ್ಸವ ಸುವರ್ಣ ಪದಕವನ್ನು ಪಡೆದಿದ್ದಾರೆ. ಅವರ 'ವಚನ ವಿಲೋಕನ' ಕೃತಿಗೆ ಬಸವ ವೇದಿಕೆಯ 'ಬಸವ ಸಾಹಿತ್ಯ ಶ್ರೀ' ಪುರಸ್ಕಾರ ಲಭಿಸಿದೆ. ವಿದ್ವತ್ ಶಿರೋಮಣಿ ಪ್ರಶಸ್ತಿ, 'ಹನಿಗವನದ ಹರಿಕಾರ' ಪ್ರಶಸ್ತಿ, ಕರ್ನಾಟಕ ಸಾಹಿತ್ಯ ಅಕಾಡೆಮಿಯ ಗೌರವ ಪ್ರಶಸ್ತಿ, ಜಾನಪದ ಮತ್ತು ಯಕ್ಷಗಾನ ಅಕಾಡೆಮಿಯ ಜಾನಪದ ತಜ್ಞ ಪ್ರಶಸ್ತಿ, ಎಚ್.ಎಲ್. ನಾಗೇಗೌಡ ಜಾನಪದ ತಜ್ಞ ಪ್ರಶಸ್ತಿ, ರಾಜ್ಯೋತ್ಸವ ಪ್ರಶಸ್ತಿ, ವಿಶ್ವಮಾನವ ಪ್ರಶಸ್ತಿ, ಚುಂಚಶ್ರೀ ಪ್ರಶಸ್ತಿ, ರಮಣಶ್ರೀ ಶರಣ ಪ್ರಶಸ್ತಿ, ಸೀತಾಸುತ ಪ್ರಶಸ್ತಿ, ವಿಶ್ವಮಾನವ ಕುವೆಂಪು ಪ್ರಶಸ್ತಿ, ಫ.ಗು. ಹಳಕಟ್ಟಿ ಪ್ರಶಸ್ತಿ, ಚಿ.ನ.ಮಂಗಳ ಪ್ರಶಸ್ತಿ, ಹೊಯ್ಸಳ ಪ್ರಶಸ್ತಿ, ರಾಜ್ಯೋತ್ಸವ ಪ್ರಶಸ್ತಿ, ಚುಟುಕು ರತ್ನ ಪ್ರಶಸ್ತಿ - ಹೀಗೆ ಹತ್ತು ಹಲವು ಪ್ರಶಸ್ತಿಗಳನ್ನು ಮುಡಿಗೇರಿಸಿಕೊಂಡಿದ್ದಾರೆ.

೧೯೭೭ ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ತನ್ನ ವಜ್ರಮಹೋತ್ಸವ ಸಂದರ್ಭದಲ್ಲಿ ಸಿಪಿಕೆ ಅವರನ್ನು ಭಾಷಾಂತರ ಕ್ಷೇತ್ರದಲ್ಲಿ ಸಲ್ಲಿಸಿದ ಸೇವೆಗಾಗಿ ಸನ್ಮಾನಿಸಿದೆ. ಹಾಗೆಯೇ ೧೯೯೧ ರಲ್ಲಿ ದಾವಣಗೆರೆಯಲ್ಲಿ ನಡೆದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಸನ್ಮಾನ ದೊರೆತಿದೆ.

ಸಿ.ಪಿ.ಕೆ. ಅವರು ಶಿವಮೊಗ್ಗದಲ್ಲಿ ನಡೆದ ಅಖಿಲ ಭಾರತ ೫೬ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಭಾಷಾಂತರ ಗೋಷ್ಠಿಯ ಅಧ್ಯಕ್ಷತೆ ವಹಿಸಿದ್ದರು. ೧೯೭೧ ರಲ್ಲಿ ನಾಗಮಂಗಲದಲ್ಲಿ ನಡೆದ ಜಾನಪದ ಸಮ್ಮೇಳನದ ಸಾಹಿತ್ಯಗೋಷ್ಠಿಯ ಅಧ್ಯಕ್ಷತೆ, ೧೯೯೦ರಲ್ಲಿ ಟಿ.ನರಸೀಪುರದಲ್ಲಿ ನಡೆದ ತಾಲ್ಲೂಕು ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ, ೧೯೯೪ ರಲ್ಲಿ ಮಂಡ್ಯದಲ್ಲಿ ನಡೆದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಕವಿಗೋಷ್ಠಿಯ ಅಧ್ಯಕ್ಷತೆ, ೧೯೯೭ ರಲ್ಲಿ ಗುಂಡ್ಲುಪೇಟೆಯಲ್ಲಿ ನಡೆದ ಮೈಸೂರು ಜಿಲ್ಲಾಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ ವಹಿಸಿದ್ದರು ಹಾಗೂ ೧೯೯೪ ರಲ್ಲಿ ಲಕ್ನೋದಲ್ಲಿ ನಡೆದ ಅಖಿಲ ಭಾರತ ಗಣರಾಜ್ಯೋತ್ಸವ ಕವಿಗೋಷ್ಠಿಯಲ್ಲಿ ಸಿಪಿಕೆಯವರು ಕನ್ನಡ ಸಾಹಿತ್ಯವನ್ನು ಪ್ರತಿನಿಧಿಸಿದ್ದರು. ೨೦೦೪ ರಲ್ಲಿ ಹುಬ್ಬಳ್ಳಿಯಲ್ಲಿ ನಡೆದ ಕರ್ನಾಟಕ ವಿಶ್ವವಿದ್ಯಾನಿಲಯದ ೨೦ನೆಯ ಅಖಿಲ ಕರ್ನಾಟಕ ಜಾನಪದ ಸಮ್ಮೇಳನದ ಅಧ್ಯಕ್ಷತೆ, ೨೦೧೧ ರ ಡಿಸೆಂಬರ್‌ನಲ್ಲಿ ಕೊಪ್ಪಳದ ಗಂಗಾವತಿಯಲ್ಲಿ ನಡೆದ ೭೮ ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ ವಹಿಸಿದ್ದರು.

ಜ್ಞಾನ, ಶಿಸ್ತು, ಗುಣ, ಸಾಧನೆ ಇವುಗಳಲ್ಲಿ ಎತ್ತರಕ್ಕೆ ನಿಲ್ಲುವ ಸಿಪಿಕೆ ಅವರು ದೈತ್ಯ ಪ್ರತಿಭೆ ಅವರೇ ಹೇಳುವಂತೆ ನವೋದಯ, ನವ್ಯಗಳ ಸಂಧಿದಶೆಯಲ್ಲಿ ಕಣ್ತೆರೆದ ಅವರ ಕಾವ್ಯ ಇಂದಿನವರೆಗೂ ಹರಿಯುತ್ತಲೇ ಇದೆ. ಯಾವುದೇ ನಿರ್ಧಿಷ್ಟ ಪಂಥಕ್ಕೆ ತಮ್ಮನ್ನು ಸೀಮಿತಗೊಳಿಸಿಕೊಳ್ಳದೆ ಅಂದಂದಿನ ಚಳುವಳಿಗೆ ಸ್ಪಂದಿಸುವಂತೆ ಕಾವ್ಯ ರಚಿಸುತ್ತಾ 'ಸಮನ್ವಯ' ಕವಿತೆಗಳನ್ನು ರಚಿಸುತ್ತಿದ್ದಾರೆ. ವೈವಿಧ್ಯತೆ ಮತ್ತು ವಿಪುಲತೆಯಿಂದ ಕೂಡಿರುವ ಅವರ

ಬರವಣಿಗೆಯಲ್ಲಿ ಕಾವ್ಯ ಪ್ರಕಾರ ಮುಖ್ಯವಾಗಿದೆ. ಜೀವನದಿಯಂತೆ ನಿರಂತರವಾಗಿ ತಮ್ಮ ವಿಚಾರ, ತತ್ವ, ತಾವು ಕಂಡುಂಡ ಅನುಭವಗಳನ್ನು ಉಣಬಡಿಸುತ್ತಾ ಆಸಕ್ತರೆಲ್ಲರಿಗೂ ದಾರಿದೀಪವಾಗಿದ್ದಾರೆ.

## ಅಡಿ ಟಿಪ್ಪಣಿಗಳು

೧. ಸಿಪಿಕೆ ಸಾಹಿತ್ಯ ಸಮೀಕ್ಷೆ- ಡಾ. ಟಿ.ಕೆ. ಕೆಂಪೇಗೌಡ, ಪು.ಸಂ. ೦೩. ಕಣ್ವ ಪ್ರಕಾಶನ, ಬೆಂಗಳೂರು, ೨೦೧೦

೨. ಸಿಪಿಕೆ ಸಮಗ್ರ ಕವಿತೆ–೧೯೫೫–೨೦೦೦, ಸಂವಹನ ಮೈಸೂರು.

ಅಧ್ಯಾಯ-೪

# ಸಿಪಿಕೆ ಅವರ ಕಾವ್ಯ ಚಿಂತನೆ:

ಆಧುನಿಕ ಕನ್ನಡ ಸಾಹಿತ್ಯವು ಪಾಶ್ಚಾತ್ಯ ಮತ್ತು ದೇಶಿಯ ಪ್ರೇರಣೆ ಪ್ರಭಾವಗಳಿಗೆ ಒಳಗಾಗಿ ಸಾಹಿತ್ಯ ಪ್ರಕಾರ ಮತ್ತು ವಸ್ತುವಿನಲ್ಲಿ ವೈವಿಧ್ಯತೆ ಪಡೆಯಿತು. ಕಾವ್ಯ ಪ್ರಕಾರದಲ್ಲಿ ಗಮನಾರ್ಹ ಕೃಷಿ ನಡೆದು ಕವಿಗಳ ಮೆಚ್ಚುಗೆಯ ಮಾಧ್ಯಮವಾಯಿತು. ಪ್ರಾಚೀನ ಸಾಹಿತ್ಯದಲ್ಲಿ ಕೇವಲ ವರ್ಣನೆಗಷ್ಟೇ ಹೆಚ್ಚು ಮೀಸಲಾಗಿದ್ದ ಪ್ರಕೃತಿಯನ್ನು ಆಧುನಿಕ ಕವಿಗಳು ಕೇಂದ್ರ ವಸ್ತುವನ್ನಾಗಿ ಮಾಡಿಕೊಂಡರು. ಕವಿ ನಿಸರ್ಗದೊಂದಿಗೆ ಜೀವಂತ ಸಂಬಂಧವನ್ನಿರಿಸಿಕೊಂಡ "ರೊಮ್ಯಾಂಟಿಕ್ ಕವಿಗಳಿಗೆ ನಿಸರ್ಗ ಚೆಲುವಿನ ತವರು ಮಾತ್ರವಲ್ಲ. ಜೀವದಿಂದ ಭಾವದಿಂದ ಸ್ಪಂಧಿಸುವ ವಿಶಿಷ್ಟ ಸೃಷ್ಟಿ" ನಿಸರ್ಗಾರಾಧನೆಗೆ ತೊಡಗಿದ ಕವಿಗಳು ಅದರಲ್ಲಿ ದೈವತ್ವದನ್ನು ಕಂಡರು. ಮನುಷ್ಯನನ್ನು ಮೀರಿದ ಶಕ್ತಿಯೊಂದಿದೆ ಎಂದು ಭಾವಿಸಿದರು. ಪ್ರಕೃತಿ ಮತ್ತು ಮನುಷ್ಯನಿಗಿರುವ ಅವಿನಾಭಾವ ಸಂಬಂಧವನ್ನು ಗುರುತಿಸಿ ಪ್ರಕೃತಿಯ ಅಂಶಗಳಲ್ಲಿ ಜೀವನದ ಏಳುಬೀಳುಗಳನ್ನು ಕಂಡುಕೊಂಡರು ಅಲ್ಲಿನ ಸೌಂದರ್ಯವನ್ನು ಸವಿದ ಹೃದಯ ಅದರ ರೌದ್ರತೆಗೂ ಬೆರಗಾಯಿತು. ಬದುಕಿನ ತಮಂಧತೆಗೆ ಮಿಂಚನ್ನು ಬೆಳಕಾಗಿಸಿ ಆಶಾವಾದಿತನವನ್ನು ಮೂಡಿಸಿತು. ಜಡತನಕ್ಕೆ ಚೈತನ್ಯವನ್ನು ನೀಡಿ ಹೊಸ ಜೀವದ ಸೃಷ್ಟಿಯ ಭರವಸೆ ನೀಡಿತು. ನಿಸರ್ಗದ ಸೂರ್ಯ, ಚಂದ್ರ, ಮೋಡ, ಮಳೆ, ಹಕ್ಕಿ-ಪಕ್ಷಿ, ಕಾಮನಬಿಲ್ಲು, ಬೆಳಕು, ರಾತ್ರಿ, ಬೆಟ್ಟ, ಗುಡ್ಡ, ನದಿ ಆಕಾಶ ಮುಂತಾದ ಎಲ್ಲ ಚೇತನ ಅಚೇತನ ವಸ್ತುಗಳು ಕವಿಗಳ ಕಾವ್ಯದಲ್ಲಿ ಕಾಣಿಸಿಕೊಂಡವು.

ನವೋದಯ ಕವಿಗಳಿಗೆ ಪ್ರಕೃತಿ ಆರಾಧನೆಯ ದೈವವಾಯಿತು. ನಂತರ ಅದನ್ನು ನೋಡುವ ದೃಷ್ಟಿಕೋನ ಕಾಲದಿಂದ ಕಾಲಕ್ಕೆ ಮನುಷ್ಯ ಬದಲಾದಂತೆ ಅದೂ ಬದಲಾಯಿತು. ಬಿ.ಎಂ.ಶ್ರೀ, ಪಂಜೆ, ಕುವೆಂಪು, ಬೇಂದ್ರೆ, ಪು.ತಿ.ನರಸಿಂಹಚಾರ್, ಜಿ.ಎಸ್.ಶಿವರುದ್ರಪ್ಪ, ಸಿ.ಪಿ.ಕೆ. ಅಡಿಗರು, ಕಣವಿ, ಅನಂತಮೂರ್ತಿ, ಬಿ.ಸಿ. ರಾಮಚಂದ್ರಶರ್ಮ, ಪಿ. ಲಂಕೇಶ್, ಸಿದ್ಧಲಿಂಗಯ್ಯ, ಬರಗೂರು ರಾಮಚಂದ್ರಪ್ಪ ಮುಂತಾದ ಎಲ್ಲರೂ ಪ್ರಕೃತಿಯನ್ನು ತಮ್ಮ ಕಾವ್ಯದ ವಸ್ತುವನ್ನಾಗಿ ಮಾಡಿಕೊಂಡು ವಿಶಿಷ್ಟ ಕಾವ್ಯಗಳನ್ನು ಸಾಹಿತ್ಯ ಕ್ಷೇತ್ರಕ್ಕೆ ನೀಡಿದರು.

ಕನ್ನಡ ಸಾಹಿತ್ಯಕ್ಕೆ ಸಿ.ಪಿ.ಕೆ. ಅವರು ನೀಡಿದ ಕಾವ್ಯ ವಿಶಿಷ್ಟವಾದವು ವೈವಿಧ್ಯವಾದವು. ಪ್ರಕೃತಿ, ಜೀವನ, ಜನಪದ, ಅಧ್ಯಾತ್ಮ, ವಿಜ್ಞಾನ; ವ್ಯಕ್ತಿದರ್ಶನ ಮುಂತಾದ ಸಮಸ್ತ ವಸ್ತುಗಳೆಲ್ಲವು ಕಾವ್ಯವಾಗಿವೆ. ಆಡುವ ಮಾತನ್ನೆಲ್ಲ ಕಾವ್ಯ ಮಾಡುವ ಗುಣ ಸಿ.ಪಿ.ಕೆ ಅವರದು. ಅವರು ಯಾವ ಒಂದು ಪಂಥಕ್ಕೂ ಅಂಟಿಕೊಳ್ಳದೆ ಸ್ವತಂತ್ರವಾಗಿ ಮತ್ತು ನವೀನ ರೀತಿಯಲ್ಲಿ ಬರೆಯುತ್ತಿರುವ ಕವಿ.

"ಸ್ವಾನುಭವಗಳು, ಕಂಡುಂಡ ನೋವು ನಲಿವುಗಳು, ಜಗತ್ತಿನ ಭಿನ್ನ ರೀತಿಗಳು, ಬದುಕಿನ ವೈಚಿತ್ರ್ಯಗಳು, ಲೋಕದ ವಿಷಯ ವೈಚಿತ್ರ್ಯಗಳನ್ನು ಅಭಿವ್ಯಕ್ತಗೊಳಿಸಲು ಕಾವ್ಯವನ್ನು ಮಾಧ್ಯಮವನ್ನಾಗಿ ಬಳಸಿಕೊಂಡು ಕನ್ನಡಕ್ಕೆ ಉತ್ಕೃಷ್ಟ ಕವಿತೆಗಳನ್ನು ಕೊಟ್ಟವರು ಸಿ.ಪಿ.ಕೆ."[೧]

## ೪.೧. ಪ್ರಕೃತಿ ಗೀತೆಗಳು :

ಸಿ.ಪಿ.ಕೆ. ಅವರ ಕವನಗಳು ವಸ್ತು ವೈವಿಧ್ಯತೆಯಿಂದ ಕೂಡಿವೆ. ಅದರಲ್ಲಿ ಪ್ರಕೃತಿಯದು ಪ್ರಮುಖ ಪಾತ್ರ, ನಿಸರ್ಗದ ಸೂರ್ಯ, ಚಂದ್ರ, ಮಳೆ, ಮೋಡ, ಮಿಂಚು, ಬೆಳಕು, ಪಕ್ಷಿ, ಕಾಮನಬಿಲ್ಲು, ಇರುಳು ಮುಂತಾದ ಎಲ್ಲ ಚೇತನ-ಅಚೇತನ ವಸ್ತುಗಳನ್ನು ಬಳಸಿ ಜೀವ ತುಂಬಿ ಅದರಲ್ಲಿ ಜೀವನ ದರ್ಶನವನ್ನು, ಪ್ರಕೃತಿಯೊಂದಿಗಿನ ಮನುಷ್ಯ ಸಂಬಂಧದ ಸ್ವರೂಪವನ್ನು ತಿಳಿಸಿಕೊಟ್ಟಿದ್ದಾರೆ.

ಪ್ರಕೃತಿಯ ಚರಾಚರ ವಸ್ತುಗಳಿಗೂ ಚೈತನ್ಯ ನೀಡುವ ಸೂರ್ಯ ಕೇಂದ್ರ ಸ್ಥಾನ ಪಡೆದುಕೊಂಡಿದ್ದಾನೆ. ಕುವೆಂಪು, ಬೇಂದ್ರೆ, ಪು.ತಿ.ನ ಮುಂತಾದ ಅನೇಕ ಕವಿಗಳು ಸೂರ್ಯನನ್ನು ವರ್ಣಿಸಿದ್ದಾರೆ. ಸಿ.ಪಿ.ಕೆ.ಯವರು ಸಹ ಅದರ ವರ್ಣನೆಯನ್ನು ಮಾಡಿದ್ದು, ನಾವಿನ್ಯತೆ ಮತ್ತು ವೈಚಾರಿಕತೆಯನ್ನು ತಂದಿದ್ದಾರೆ.

**'ತಾರಾಸಖ'** ಕವನ ಸಂಕಲನದ ಮೊದಲನೆಯ ಕವನ **'ಸೂರ್ಯೋದಯ'** ಸಿಪಿಕೆ ಅವರ ಕಾವ್ಯ ಬದುಕಿನ ಸೂರ್ಯೋದಯ ಎಂದು ಕರೆಯಬಹುದು. ಅವರ ಚಿಂತನೆಯ ಚಿತ್ತಾರವನ್ನು, ಅದು ಇಲ್ಲಿ ನವತ್ವವನ್ನು ಪಡೆದಿರುವುದನ್ನು ಗಮನಿಸಬಹುದು.

ಕುವೆಂಪು ಅವರು ಸೂರ್ಯೋದಯವನ್ನು ಕಂಡು- "ಆನಂದಮಯ ಈ ಜಗಹೃದಯ: ಏತಕೆ ಭಯ ಮಾಣೋ! ಸೂರ್ಯೋದಯ ಚಂದ್ರೋದಯ, ದೇವರ ದಯ ಕಾಣೋ !". [೨] ಎಂದಿದ್ದಾರೆ. ಸಿಪಿಕೆ ಅವರು ತಮ್ಮ ಕವನದಲ್ಲಿ- ಸೂರ್ಯೋದಯ ಇಲ್ಲಿ ಕೇವಲ ಬರಿಯ ಸೂರ್ಯನ ಉದಯವಲ್ಲ ಅಜ್ಞಾನವನ್ನೋಡಿಸಿ ಜ್ಞಾನವನ್ನು, ಕತ್ತಲನ್ನು ಓಡಿಸಿ ಬೆಳಕನ್ನು, ಜಡತ್ವವನ್ನು ಓಡಿಸಿ ಚೈತನ್ಯವನ್ನು ಮೂಡಿಸುವ ಅಮೃತ ಬಿಂದುವಾಗಿದೆ.

**ವರ್ಣ ಶಿಲ್ಪಿಯದಾರು ಕುಂಚವನ್ನು ಹಿಡಿದಿಹನೊ**
**ನೋಡು, ಮೂಡಣ ಬಾನು ಕಲಾಶಾಲೆ!**
**ನಭದ ನೀಲಿಗೆ ನೂರು**
**ವಜ್ರ ವೈಡೂರ್ಯ ರತ್ನಗಳ ಮಾಲೆ!**
**(ರಚನೆಗೈದವನಾವ ಅಕ್ಕಸಾಲೆ?)**

ಎಂದು ಹೇಳುವ ಮೂಲಕ ಕವಿ ಸೂರ್ಯೋದಯದ ಮುನ್ಸೂಚನೆ ನೀಡುತ್ತಲೆ, ಯಾರೀ ಕಲಾಕಾರ? ಎಂಬ ಪ್ರಶ್ನೆಯೊಂದಿಗೆ ಸೂರ್ಯನ ಆಗಮನದ ಚಿತ್ರಣವನ್ನು ಮುಂದಿನ ಪದ್ಯದಲ್ಲಿ ನೀಡಿದ್ದಾರೆ.

**ಬಂತದೋ ರವಿರಾಜನೇಳು ಬಣ್ಣದ ತೇರು,**
**ಹೊರಹೊರಟರೋ ಕಿರಣಯೋಧರು ಸಹಸ್ರಾರು**
**ಲೋಕಲೋಕಗಳ ದಿಗ್ವಿಜಯಕೆಂದು!**
**ಮಣ್ಣು ಹೊನ್ನಾಗಿಹುದು.**
**ಈ ಪ್ರಪಂಚವೆ ಬೆಳಕಿನೊಂದು ಸಿಂಧು!**

ಚೈತನ್ಯದ ಶಕ್ತಿ ಕೇಂದ್ರವಾದ ಸೂರ್ಯನಿಂದ ಹೊರಟ ಕಿರಣಗಳನ್ನು ಲೋಕವನ್ನು ಗೆಲ್ಲಬೇಕೆಂದು ಹೊರಟ ಯೋಧರಿಗೆ ಹೋಲಿಕೆ ನೀಡುತ್ತಾ ಕಿರಣ ಯೋಧರು ಭೂಮಂಡಲವನ್ನು ವ್ಯಾಪಿಸಿ ಇಡೀ ಪ್ರಪಂಚಕ್ಕೆ ಬೆಳಕು ನೀಡಿ ಅದನ್ನು ಬೆಳಕಿನ ಸಮುದ್ರವಾಗಿಸಿದ ಚಿತ್ರಣ ಅರ್ಥಪೂರ್ಣವಾಗಿ ಬಂದಿದೆ.

**ಉಲ್ಲಸದಿ ಕಂಪಿಸಿದೆ ತಂಗಾಳಿ ಕಡಲು**
**ಹೊರಟಿಹವು ಮರಮರದ ದ್ವೀಪದಲಿ ತಂಗಿದ್ದು**
**ವಿಶ್ರಮಿಸಿಕೊಂಡ ಹಕ್ಕಿಗಳು ಹಡಗು**
**ಏನು ಬೆಡಗು !**

ಇಲ್ಲಿ ಕವಿ ಸೂರ್ಯೋದಯದ ಚೈತನ್ಯವನ್ನು ಕುರಿತು ಹೇಳಿದ್ದಾರೆ. ಲೋಕದ ಚರಾಚರ ವಸ್ತುಗಳಿಗೂ ಚೈತನ್ಯ ಶಕ್ತಿಯನ್ನು ನೀಡುವವ ಸೂರ್ಯ. ಅವನ ಉದಯದೊಡನೆ 'ತಂಗಾಳಿ', 'ಮರಮರದ ದ್ವೀಪ' ಅಂದರೆ ಮರದ ಗೂಡಿನಲ್ಲಿ ತಂಗಿ ರಾತ್ರಿಯೆಲ್ಲ ವಿಶ್ರಾಂತಿಗೈದ ಹಕ್ಕಿಗಳ ಹಡಗು ಚಿಲಿಪಿಲಿ ಶಬ್ದಗೈಯುತ್ತಾ ಸೂರ್ಯೋದಯದ ಸೂಚನೆ ಕೊಡುವ ಪರಿಯನ್ನೆ ಏನು ಇದು ಬೆಡಗು ಎಂದು ಉದ್ಗರಿಸುತ್ತಾರೆ.

ಎಂಬ ಚಿತ್ರಣ ನೀಡಿದ್ದಾರೆ. ಅಂದರೆ ಸೂರ್ಯನೆಂಬ ಮಂತ್ರವಾದಿ ಕಣ್ ತೆರೆದ ಕೂಡಲೆ ಕತ್ತಲು ಓಡಿ ಹೋಯಿತು. ಜಡತನಕ್ಕೆ ಜೀವ ನೀಡಿ ಹೊಸದಿನ, ಹೊಸ ಉತ್ಸಾಹ ಆನಂದ ನೀಡಿದ ಬಗೆಯನ್ನು ಹೂವು ಪಕ್ಷಿಗಳ ಮೃದು ಮಧುರ ವಸ್ತುಗಳ ಚೈತನ್ಯದೊಂದಿಗೆ ಹೇಳಿದ್ದಾರೆ. ಇಲ್ಲಿ 'ಮಂತ್ರವಾದಿ' ಎಂಬ ಪದ ಔಚಿತ್ಯ ಪೂರ್ಣವಾಗಿ ಬಂದಿದೆ.

**ನಿಶೆಯ ಮಾಯೆಯಲಿ ಪ್ರಜ್ಞಾಹೀನವಾಗಿರುವ**
**ಬುವಿಗೆ ಚೈತನ್ಯವನು ದಾನ ಕೊಡಲು**
**ಮೂಡಿತಗೊ ನೇಸರಿನ ಅಮೃತಬಿಂಬ ;**
**ಇನ್ನು ಪ್ರಾಣದ ಸೃಷ್ಟಿ ಮತ್ತೆ ಪ್ರಾರಂಭ !**

ನಿತ್ಯ ಜೀವನದ ನಾಟಕಕ್ಕೆ ಸೂತ್ರಧಾರನಾದ ಸೂರ್ಯ ಪ್ರಜ್ಞಾ ಹೀನವಾಗಿರುವ ಭುವಿಗೆ ಮಾತ್ರ ಚೈತನ್ಯ ನೀಡುತ್ತಿಲ್ಲ, ಮನಸ್ಸಿಗೂ ಸಹ ಚೈತನ್ಯ ನೀಡಲೆಂದೇ ಭಾಸ್ಕರನ ಅಮೃತಬಿಂಬ ಮೂಡಿತು. ಇನೂ ಪ್ರಾಣದ ಸೃಷ್ಟಿ ಮತ್ತೆ ಪ್ರಾರಂಭ ಎಂದು ಹೇಳಿದ್ದಾರೆ.

ಕತ್ತಲಿಗೆ ಬೆಳಕನ್ನು, ಅಜ್ಞಾನಕ್ಕೆ ಜ್ಞಾನವನ್ನು, ಜಡತ್ವಕ್ಕೆ ಚೈತನ್ಯವನ್ನು ನೀಡಲೆಂದೇ ಉದಯಿಸಿದ ಸೂರ್ಯ ಇಡೀ ಲೋಕವನ್ನೇ ಜಯಿಸಿದ್ದಾನೆ. ಕತ್ತಲೆಯ ಹಿಂದೆ ಬೆಳಕಿದೆ. ಅದರಿಂದ ಜೀವದ ಸೃಷ್ಟಿ ಮತ್ತೆ ಸಾಧ್ಯ ಎಂದು ತೋರಿಸಿಕೊಟ್ಟ ಬಗೆ ಅದ್ಭುತವಾಗಿದೆ.

**'ತಾರಾಸಖ'** ಕವನ ಸಂಕಲನದ 'ಮಧ್ಯಾಹ್ನ' ಕವನದಲ್ಲಿ ಸೂರ್ಯನ ಪ್ರಖರತೆ, ಶಾಖ ಅದರಿಂದಾಗುವ ಪರಿಣಾಮವನ್ನು ಪ್ರತಿಮೆಗಳ ಮೂಲಕ ಚಿತ್ರಿಸಿದ್ದಾರೆ.

**ಲೋಕದ ಮೊಟ್ಟೆಯನ್ನು ಅಪ್ಪಿ**
**ಕಾವು ಕೂತಿರುವುದು ಬಿಸಿಲು**
**ರೆಕ್ಕೆಯ ನಡುಹಗಲು;**
**ಇದರಿಂದಲೆ ಮೂಡಿಬಹುದು**
**ಇರುಳಿನಲ್ಲಿ ಸುಮಕೋಮಲ**
**ತುಪ್ಪುಳ ಬೆಳದಿಂಗಳು!**

ಅದ್ಭುತ ರೂಪಕದೊಂದಿಗೆ ಆರಂಭವಾಗುವ ಈ ಸಾಲುಗಳು ಬಿಸಿಲು ಹೇಗೆ ಆವರಿಸಿಕೊಂಡಿದೆ, ನಂತರ ಇರುಳಿನ ಬೆಳದಿಂಗಳು ಹೇಗೆ ಮೂಡುತ್ತದೆ ಎನ್ನುವುದನ್ನು ತಿಳಿಸಿದ್ದಾರೆ. ಜೀವನದ ನಡುಹಗಲಿನ ಬಿಸಿಲ ಬೇಗೆಯನ್ನು ಸಹಿಸಿಕೊಂಡರೆ ನಂತರದಲ್ಲಿ ತುಪ್ಪುಳ ಬೆಳದಿಂಗಳ ತಂಪು ಸಿದ್ಧಿಸುವ ಬಗೆ ಅರ್ಥಪೂರ್ಣವಾಗಿದೆ.

ನಂತರದ ಪದ್ಯದಲ್ಲಿ ಬಿಸಿಲಿನ ದಾಳಿಯಿಂದಾಗಿ ಗಿಡಮರಗಳು ಸ್ತಬ್ದವಾಗಿ ಇಡೀ ಭೂಮಿಯೇ ಹೆಣದಂತೆ ಬಿದ್ದಿರುವುದು ಪ್ರಕೃತಿಯ ರೌದ್ರತೆಯ ಪರಿಣಾಮವಾಗಿದೆ.

**ಬಿಸಿಲಿನ ಹಾಳೆಯಲಿ ಮಸಿಯ**
**ಚೆಲ್ಲಿದವೊಲು ಅಲ್ಲಿ ಇಲ್ಲಿ**
**ನೆರಳಿನ ಕನವರಿಕೆ !**
**ಭೂಮಿತಾಯಿ ಬೆವರಿದಂತೆ**
**ಟಾರ್ ರೋಡೊಳು ದೂರದೂರ**
**ಮಿರುಗುತಿವೆ ಮರೀಚಿಕೆ !**

'ಬಿಸಿಲಿನ ಹಾಳೆಯಲಿ ಮಸಿಯ ಚೆಲ್ಲಿದವೊಲು' ಭೂಮಿ ತಾಯಿ ಬೆವರಿದಂತೆ ಇಂಥ ಉಪಮೆಗಳ ಬಳಕೆ ಪರಿಣಾಮಕಾರಿಯಾಗಿದೆ. ಮುಂದುವರಿದು ಭೂಮಿಗೆ ಆಕಾಶ ನೀಡಿದ ಶಾಪದಿಂದ ಇಡೀ ವಸುಧೆ ಜೀವಕಳೆದುಕೊಂಡು ನಿಶ್ಚೇಷ್ಟಿತೆಯಾದುದನ್ನು ನಾಲ್ಕು ದಿಕ್ಕುಗಳು ನಿಟ್ಟುಸಿರು ಬಿಡುತ್ತಿರುವುದನ್ನು ಚಿತ್ರಿಸಿದ್ದಾರೆ.

**ತಾಯೊಬ್ಬಳು ಎಳೆಗೂಸನು**
**ವಕ್ಷಕೊತ್ತಿ ಸಾಗುತಿಹಳು ವದನವೂ ಕೆಂದಾವರೆ,**
**ಕರುಣಿಸು, ಝಳದೀ ಹೊಯ್ಲಿಗೆ**
**ಬೆಣ್ಣೆ ಮುದ್ದೆಯಂಥ ಹಸುಳೆ**
**ಕರಗದವೊಲು, ದೇವರೇ !**

ತಾಯಿ ಮಗುವನ್ನು ರಕ್ಷಿಸುವಂತೆ, ಭೂಮಿ ಜೀವಿಗಳನ್ನು ರಕ್ಷಿಸುತ್ತಿದೆ. ಬಿಸಿಲಿನ ಪ್ರಖರತೆಗೆ ಬೆಣ್ಣೆ ಮುದ್ದೆಯಂಥ ಹಸುಳೆ ಕರಗದಂತೆ ಕಾಪಾಡು ಎಂದು ದೇವರನ್ನು ಕೇಳಿಕೊಂಡಿರುವ ರೀತಿಯಲ್ಲಿ ದೈನ್ಯತೆಯ ಮೊರೆಯನ್ನು ಕಾಣಬಹುದಾಗಿದೆ.

**'ನೂರೊಂದು'** ಕವನ ಸಂಕಲನದ **'ಬೆಳಕು'** ಕವನವು ಪ್ರಕೃತಿ ಮತ್ತು ಜೀವನದ ಸಂಬಂಧದ ವಾಸ್ತವತೆಯನ್ನು ತಿಳಿಸಿಕೊಡುತ್ತದೆ. ಪ್ರಕೃತಿ ಮತ್ತು ಅದರ ಅಂಶಗಳೆಲ್ಲ ತನಗಾಗಿಯೇ ಎಂದು ಭಾವಿಸಿ ಅಹಂಕಾರದಿಂದ ಬೀಗುತ್ತಿರುವ ಮನುಷ್ಯನಿಗೆ ಸೂರ್ಯ ಕೇವಲ ದೊಡ್ಡ ಬೆಂಕಿಯ ಚೆಂಡು, ಚಂದ್ರ, ಅವನಿಗೇ ಬೆಳಕಿಲ್ಲ, ಎರವಲು ಕಾಂತಿ. ಗ್ರಹನಕ್ಷತ್ರಗಳು ಎಷ್ಟಿದರೂ

ಅವು ನಮ್ಮ ಪಾಲಿಗೆ ವ್ಯರ್ಥ ಮುಂತಾದ ಮಾತುಗಳು ಯಾವುದೂ ನಮಗಾಗಿ ಅಲ್ಲ ಎಂಬ ವಾಸ್ತವವನ್ನು ತಿಳಿಸುತ್ತವೆ.

**ಕವನದ ಕೊನೆಯಲ್ಲಿ**
**"ಹೀಗಾಗಿ ಕಡೆಗೂ ನಮಗೆ ಗತಿ ನಮ್ಮ ನಮ್ಮ**
**ದೀಪಗಳೆ, ಕಿರು ಹಣತೆಗಳೆ–**

ಎಂಬ ಸಾಲುಗಳ ಮೂಲಕ ಮನುಷ್ಯ ತನ್ನ ದಾರಿಯ ಬೆಳಕನ್ನು ತಾನೇ ಕಂಡುಕೊಳ್ಳಬೇಕೆಂಬ ಆಶಯವನ್ನು ವ್ಯಕ್ತಪಡಿಸಿದ್ದಾರೆ.

**'ತಾರಾಸಖ'** ಕವನ ಸಂಕಲನದ **'ಬೆಳಗು'** ಕವಿತೆಯಲ್ಲಿ

**ಕನಸನು ಮರೆ**
**ಕಣ್ಣನು ತೆರೆ**
**ಹಗಲುದಿಸಿಹುದಣ್ಣ**
**ರಾತ್ರಿಯ ಮಸಿಯನ್ನು ನುಂಗಿದುದಾಹಾ**
**ಬೆಳಗಿನ ಸೀಮೆಯ ಸುಣ್ಣ !**

ಎಂಬ ಸಾಲುಗಳು ಮನುಷ್ಯ ತಾನು ಮಾಡಬೇಕಾದ ಕಾರ್ಯ ಮರೆತು ಮಲಗಿ ಕನಸು ಕಾಣುತ್ತಿದ್ದಾನೆ. ಅವನನ್ನು ಎಚ್ಚರಿಸಿ ಅಜ್ಞಾನದ ಮಸಿಯನು ನುಂಗಲು ಸೂರ್ಯನ ಉದಯವಾಗಿದೆ. ಜ್ಞಾನದ ಕಣ್ಣನು ತೆರೆ **'ಅಣ್ಣಾ'** ಎಂದು ಸಂಬೋಧಿಸಿ ಹೇಳಿರುವುದು ಆತ್ಮೀಯ ಬೋಧನೆಯಂತಿದೆ.

**'ಹುಣ್ಣಿಮೆಯ ರಾತ್ರಿ'** ಕವನದಲ್ಲಿ ಹುಣ್ಣಿಮೆ ಚಂದ್ರನ ಬೆಳಕನ್ನು ಕ್ಷೀರ ಸಾರಗಕ್ಕೆ ಹೋಲಿಕೆ ನೀಡುತ್ತಾ ಅದರಲ್ಲಿ **'ನಿಸರ್ಗ ವನಿತೆ'** ಆನಂದದಿ ಮಿಂದು, ಪುಳಕಗೊಳ್ಳುತ್ತಾ

**ಭೂರಮೆ ಧವಳಸುಶೋಭಿತ ಹಚ್ಚಡದಡಿಯಲ್ಲಿ**
**ನಿದ್ದೆಯ ಗೈದಿಹಳೋ** ಎಂದು ಉದ್ಗರಿಸುತ್ತಾ

**ಪರಮಾತ್ಮನ ಕೃಪೆ ಜೊನ್ನದ ರೂಪದಿ ಜಡ–ಜೀವರ ಬಳಿಗಿಳಿದಿಹುದೊ–**
**ವಿರಚಿಸುತೀ ಪರಿ ಬುವಿಯಲಿ ಸಗ್ಗದ ಮಹಿಮೆಯ ಹರಡಿದೆ ಚಂದ್ರಿಕೆಯು!**

ಎಂಬ ಸಾಲುಗಳು ಪರಮಾತ್ಮನ ಲೀಲೆಯಿಂದ ಇಡೀ ಭೂಮಿಯೇ ಸ್ವರ್ಗವಾಗಿದೆ ಎಂಬ ಕಲ್ಪನೆ ಮೂಡಿಸಿದ್ದಾರೆ. ಶಿವನ ಕೃಪೆ ಇರಲು ಬುವಿಯಲ್ಲಿ ಸ್ವರ್ಗವೇ ಸೃಷ್ಟಿಯಾಗಿದೆ. ಇಲ್ಲಿ **'ಭೂರಮೆ', 'ಧವಳಸುಶೋಭಿತ', 'ಜೊನ್ನದ'** ಎಂಬ ಪದಗಳ ಬಳಕೆ ವಿಶಿಷ್ಟವಾಗಿದೆ.

ಮುಂದಿನ ಪದ್ಯದಲ್ಲಿ ಚಂದ್ರನನ್ನು ಭೂದೇವಿಯ ಮುಖವನ್ನು ನೋಡಲು ದೇವತೆಗಳಿಡಿದ ಕನ್ನಡಿಯೊ, ಕತ್ತಲಡಗಿಸಲು ಸುರರು ಆಕಾಶದಲ್ಲಿ ಹಚ್ಚಿದ ಬಂಗಾರದ ದೀವಿಗೆಯೊ, ಆಗಸದೇವಿಯ ಬೆಳಕಿನ ತಿಲಕವೊ ಎಂಬಂತೆ ಓಮಕರನು ಬಾಂದಳದಲಿ ಅಗಣಿತ ತಾರೆಗಳೊಂದಿಗೆ ಸಾಗುವ ಪರಿಯನ್ನು ಮನೋಜ್ಞವಾಗಿ ಕಟ್ಟಿಕೊಟ್ಟಿದ್ದಾರೆ.

**ಧರಣಿಯ ಚೆಲುವನು ಈಕ್ಷಿಸಲಮರರು ನಭದಲಿ ನೆರೆಯಲು ನಾಣ್ ತೊರೆದು,**
**ಕೆರಳಿದ ಅಂಗನೆ ಶಾಪವನೀಯಲು ಉಡುಗಳ ರೂಪವ ತಾಳಿದರೊ,**
**ಮೋಕ್ಷವ ಗಳಿಸಿದ ವಿಮಲತ್ಮಾರು ನಕ್ಷತ್ರದ ರೂಪಿನೊಳೆಸೆದಿಹರೊ-**
**ಈಕ್ಷಿಸಲೀ ಪರಿ ತೋರುತ ಶೋಭಿಸುತಿರುವುದು ತಾರಾತಿಂತಿಣಿಯು !**

ಎಂದು ಹೇಳುವಲ್ಲಿ ಬೆಳದಿಂಗಳ ಸಂದರ್ಭದಲ್ಲಿ ಭೂರಮೆಯ ರೂಪ ಸೌಂದರ್ಯದ ವೈಶಿಷ್ಟತೆಯ ಚಿತ್ರಣವನ್ನು ಅದ್ಭುತವಾಗಿ ಕಟ್ಟಿಕೊಟ್ಟಿದ್ದಾರೆ.

ವಿರಹದಿ ಸೊರಗಿದ ವ್ಯೋಮವು ತನ್ನ ಪ್ರೀತಿಯ ಬುವಿಗೆ ಪ್ರೇಮ ಸಂದೇಶವನ್ನು ತಲುಪಿಸಲು ಬಂದ ದೂತನೊ ಎನ್ನುತಾ "ಕುಸುಮಗಳೆದೆಯಿಂದಲಿ ಹೊರಹೊಮ್ಮುವ ಸೌರಭ ತೀಡುವುದಿಂತೆನಲು ಮಿಸುಗುತಲಿರ್ಪುದು ತಂಬೆಲರೆಲ್ಲೆಡೆ ಹರ್ಷದಿ ಸ್ಪಂದಿಸಿ ತರುವೃಂದ! ಹೀಗೆ ಅವುಗಳು ಸ್ವಾಗತಿಸುವ ಪರಿಯನ್ನು ಹೇಳುವ ಕವಿ ಹುಣ್ಣಿಮೆ ರಾತ್ರಿಯ ಸೃಷ್ಟಿ ಸೌಂದರ್ಯದ ಸುಧೆಯನ್ನು ವರ್ಣಿಸುತ್ತಾ." ಆಯಾ ಶಕ್ತಿಯ ಸುಂದರ ಕನಸಿದೊ, ಕಲೆಗಾರನ ಕುಂಚದ ಕೃಪೆಯೊ, ಭಾವುಕನಾವನ ಮನದಾದರ್ಶವೊ, ಆರ ಕೃಪಾ ಸಾಗರದಿ ಸೃಷ್ಟಿಯ ಸೌಂದರ್ಯದ ಸುಧೆ ಹೊಮ್ಮಿದದೊ, ಎಂದು ಈ ಸೃಷ್ಟಿಯ ಅದ್ಭುತಕ್ಕೆ ಕಾರಣನ್ಯಾರು? ಎಂದು ಉದ್ಗರಿಸುತ್ತಾ, ಯಾರಾದರಾಗಲಿ ಅರ್ಪಿಸುವೆನ್ ಕಣ್ಣಲ್ಲೆ ವಂದನೆಗಳನ್ನು ಎನ್ನುತ್ತಾರೆ. ಈ ಕವಿತೆಯನ್ನು ಓದುವಾಗ ಕುವೆಂಪುರವರ 'ಬಾ ಪಾಲ್ಗುಣ ರವಿದರ್ಶನಕೆ' ಕವಿತೆಯ ಪ್ರಭಾವವನ್ನು ಇದರಲ್ಲಿ ಗುರುತಿಸಬಹುದು.

**"ತಾರಾಸುಖ"** ಕವನ ಸಂಕಲನದ ಶೀರ್ಷಿಕೆ ಗೀತೆ **'ತಾರಾಸಖ'** ಕವಿತೆ ಗೇಯ ಗುಣವನ್ನೊಂದಿ ಭಾವಗೀತೆಯಂತೆ ಮೂಡಿ ಬಂದಿದೆ. ಇದರಲ್ಲಿ ಭಾವ ಮಾಧುರ್ಯ ಬಂದಿರುವುದನ್ನು ಗಮನಿಸಬಹುದು.

**ನೀಲಾಂಬರದಲಿ ಮಿರುಗುವ ತಾರೆ**
**ನನ್ನೀ ಮನ ಅರಳೆಯ ತೆರನಾದುದು**
**ವ್ಯಥೆಯನು ನೀ ಹೀರೆ !**
**ನಗುವನು ಸೂಸುತಲೀ ಪರಿ ಎನ್ನ**
**ಕುಶಲವ ಕೇಳುವೆಯ ?**
**ಶಿಶುಮುಗ್ಧತೆಯನು ಎನ್ನೊಳು ಚೋದಿಸಿ**
**ಎದೆಯನು ಆಳುವೆಯ ?**

ಎಂದು ಕೇಳುತ್ತಾ, ಸೂರ್ಯ ಮರೆಯಾಗುವುದರೊಂದಿಗೆ ಚಂದ್ರನ ಆಗಮನವಾಗಬೇಕು. ಅದೇ ಸೃಷ್ಟಿ ವೈಶಿಷ್ಟ್ಯ ಆದರೆ ನೀ ಬರದೆ ಎಲ್ಲೆಡೆ ಮೌನ ಆವರಿಸಿದೆ.

**ಖೇಚರ ನೀನು**
**ಭೂಚರ ನಾನು**
**ಈ ಚಣದಲ್ಲಿ ನಮ್ಮಿಬ್ಬರ ಕಂಡು,**
**ನಮ್ಮಾನಂದದ ಜಾಡ್ಯವು ಹಬ್ಬಿ**
**ನಲಿಯಲಿ ಸೃಷ್ಟಿಯೆ ತಲೆದೂಗಿ !**

ಇಲ್ಲಿ ಖೇಚರ ಭೂಚರರ ಭೇಟಿಯಿಂದಾಗಿ ಉಂಟಾದ ಸಂತೋಷವು ಅವರಿಗೆ ಮಾತ್ರವಲ್ಲ. ಇಡೀ ಸೃಷ್ಟಿಗೆ ಹರಡಲಿ ಎಂಬ ಆಸೆ, ಜೊತೆಗೆ ನಿನ್ನನ್ನು ಬೀಳ್ಕೊಟ್ಟ ಕೂಡಲೆ ಚಿಂತೆ ಆವರಿಸುವುದೆಂಬ ಯೋಚನೆ –

**ಏನಾದರೂ ಆಗಲಿ.**
**ಕವಿಯಲಿ ಪ್ರಳಯ**
**ಮುಳುಗಿಸಲಿಳೆಯ**
**ಏನೇ ಆಗಲಿ, ಈ ನಿಮಿಷ**
**ತಾಳುತ ಹರುಷ**
**ಎಲ್ಲವ ಮರೆಯುವೆನೆ**
**ಮರೆಯುತ ಸುಖಿಸುವೆನು.**

ಎಂಬ ಕಲ್ಪನೆ ಚೇತೋಹಾರಿಯಾಗಿದೆ.

ಹಾಗೆಯೇ ಚಂದ್ರನನ್ನು ಕುರಿತು ನಿನ್ನೆದುರು ನಿಂತು ಬೇರೆ ಏನಾದರೂ ಯೋಚಿಸುವುದೂ ತಪ್ಪು. ಸುಮ್ಮನೆ ನಿನ್ನನ್ನು ನೋಡುತ ತಂಪನ್ನು, ಆನಂದವನ್ನು ಪಡೆಯುವೆನು ಎನ್ನುವ ಮಾತುಗಳು ಇದ್ದುದನ್ನು ವ್ಯವಸ್ಥಿತವಾಗಿ ಬಳಸಿಕೊಳ್ಳಬೇಕೆಂಬ ಸಂದೇಶವನ್ನು ಹೇಳುತ್ತವೆ.

**ದಿನದಿನ ಒಂದೇ ಚಣ ನೀನಿಂತು**
**ಸಂಗವ ಕರುಣಿಸು; ಬೇಡುವೆನು!**

ಎಂಬ ಸಾಲುಗಳು ಪ್ರಕೃತಿಯ ಸಾನಿಧ್ಯ ತಿಂಗಳ ತಂಪು ಮನುಷ್ಯ ಜೀವನದಲ್ಲಿ ಎಷ್ಟು ಮುಖ್ಯ ಪಾತ್ರ ವಹಿಸುತ್ತದೆ ಎಂಬುದನ್ನು ತಿಳಿಸುತ್ತದೆ.

**ತಾರಾಸಖ** ಕವನ ಸಂಕಲನದ **'ಬೆಳಕಿನ ಸಹಿ'** ಕವನವು ಕುವೆಂಪುರವರ ದೇವರು ರುಜು ಮಾಡಿದನು ಕವನವನ್ನು ನೆನಪಿಗೆ ತರುತ್ತದೆ. ಈ ಕವನದಲ್ಲಿ ದಶದಿಕ್ಕುಗಳನ್ನು ಕಗ್ಗತ್ತಲು ವ್ಯಾಪಿಸಿದ ಸಂದರ್ಭದಲ್ಲಿ ಇನ್ನೆಂದಿಗೂ ಬೆಳಗಾಗುವುದಿಲ್ಲವೇನೋ ಎಂಬ ಭಯ ವ್ಯಾಪಿಸುತ್ತದೆ, ಆಗ ನಡೆದ ವಿಸ್ಮಯ ಘಟನೆಯನ್ನು ಕುರಿತು ಹೇಳುತ್ತದೆ. ಕತ್ತಲ ಹಿಂದೆ ಬೆಳಕು. ನೋವಿನ ಹಿಂದೆ ನಲಿವು ಇದೆ ಎಂಬ ಆಶಾವಾದವನ್ನು ಈ ಕವಿತೆ ಹೇಳುತ್ತದೆ. ಡಾ॥ ಟಿ.ಕೆ ಕೆಂಪೇಗೌಡ ಅವರು ತಮ್ಮ **'ಸಿ.ಪಿ.ಕೆ ಸಾಹಿತ್ಯ ಸಮೀಕ್ಷೆ'** ಪುಸ್ತಕದಲ್ಲಿ " **'ಬೆಳಕಿನ ಸಹಿ'** ಕವಿತೆಯೂ ಸೂರ್ಯನ ವಿಸ್ಮಯಗಳನ್ನು ಚಿತ್ರಿಸುತ್ತದೆ"[೩] ಎಂದಿದ್ದಾರೆ ಆದರೆ ಇಲ್ಲಿ **'ಮಿಂಚು'** ಸಹಿಯಾಗಿ ವಿಸ್ಮಯ ಮೂಡಿಸಿದೆ.

**ಕಾರ್ಮೋಡಗಳಾಕಾಶದಿ**
**ಬೀಡನು ಬಿಟ್ಟಿರಲು**
**ದಶದಿಕ್ಕುನ್ನು ಒಳಕೊಳ್ಳಲು**
**ಕಗ್ಗತ್ತಲಿನೊಡಲು–**

ಇಲ್ಲಿ ಮೋಡ ಕವಿದ ಆಕಾಶ ಕಷ್ಟಗಳೆದುರಾದ ಜೀವನಕ್ಕೆ ಸಾಂಕೇತಿಕವಾಗಿದೆ. ಕಗ್ಗತ್ತಲಿನಲ್ಲಿ ನಿಂತಾಗ ಭಯ ಸಹಜವಾಗಿದೆ. ಆಗ ನಡೆದ ವಿಸ್ಮಯ

ನೋಡುತ್ತಿರೆ ಕೋರೈಸಿತು
ಕಣ್ಣನು ಕೋಲ್ಮಿಂಚು
ಚಣಮಾತ್ರದಿ ಹಾಳಾದುದು
ಕತ್ತಲಿನೊಳಸಂಚು
ಹೀಗೆ ಕತ್ತಲ ಸಂಚನ್ನು ನಾಶಮಾಡಿತು ಮಿಂಚು.
ಕೇವಲ ಮಿಂಚಲ್ಲವು ಕಾಣ್ ;
ಇದುಬೆಳಕಿನ ರುಜುವು ;
ಬೆಳಕಿದು ಅವಿನಾಶಿಯೆನಲು
ಸಾಕ್ಷಿಯೊ ಈ ಸಹಿಯು ;

ಕತ್ತಲು ಎದುರಾದರೂ ಅದು ಶಾಶ್ವತವಲ್ಲ, ಬೆಳಕನ್ನು ಅದು ನುಂಗಲು ಸಾದ್ಯವಿಲ್ಲ ಎಂಬುದಕ್ಕೆ ಸಾಕ್ಷಿಯಾಗಿ 'ಮಿಂಚನ್ನು' ಕಂಡಿದ್ದಾರೆ.

ಮುಂದಿನ ಪದ್ಯದಲ್ಲಿ 'ಕರಿಮೋಡದ ಕಾಗದದಲ್ಲಿ ಹೊನ್ನೀರಿನ ಬರಹ; ಎಂಬ ಅದ್ಭುತ ಕಲ್ಪನೆಯನ್ನು ರಸವತ್ತಗಿ ಚಿತ್ರಿಸಿದ್ದಾರೆ.

ಬೆಳಕಿನ ಸಹಿಯಿಂದ ನಿಶ್ಚಯ
ಇದ ನಂಬಲೆ ಬೇಕು
ಕತ್ತಲೆಯೊಳೆ ಬೆಳಕಿದೆಯೆನೆ
ಈ ಸಾಕ್ಷಿಯೆ ಸಾಕು !

ಕವಿತೆಯ ಈ ಕೊನೆಯ ಸಾಲುಗಳು ಕವಿಯ ಆಶಯವನ್ನು ವ್ಯಕ್ತಪಡಿಸುತ್ತವೆ ಜೀವನದಲ್ಲಿ ಎದುರಾಗುವ ಕಷ್ಟ ತೊಂದರೆಗಳು ಕಾರ್ಮೋಡ ಮುಸುಕಿದ ವಾತಾವರಣದಂತೆ. ಶಾಶ್ವತವಲ್ಲ ಮಿಂಚೆಂಬ ದೈವೀ ಕೃಪೆ ದೊರೆತೇ ದೊರೆಯುತ್ತದೆ.

**'ತಾರಾಸಖ'** ಕವನ ಸಂಕಲನದ **'ಕಾಮನಬಿಲ್ಲು'** ಕವನವು ಪ್ರಕೃತಿಯ ವಿಸ್ಮಯಗಳಲ್ಲಿ ಒಂದಾದ ಕಾಮನಬಿಲ್ಲನ್ನು ಕವಿಯ ಮನಸ್ಸಿಗೆ ಹೋಲಿಸಿದರೆ ಅದು ಕಲ್ಪನಾ ಚಿತ್ರವಾಗಿದೆ.

ಕವಿಮನದ ಬಣ್ಣಾಬಣ್ಣದ ಭಾವವೀಚಿಗಳು
ನಿಂತವೋ ರೂಪತಳೆದು

ಕವಿಯ ಕಲ್ಪನೆಯ ಲೋಕಕ್ಕೆ ಹೆಬ್ಬಾಗಿಲಿನಂತಿರುವ ಇದಕ್ಕೆ ಏಳುಸುತ್ತಿನ ರತ್ನದ ಕೋಟೆಯಿದೆ

ಕ್ಷಣಿಕವಾದರು ಬಾಳಿನಲಿ ತುಂಬಿಹುದು ಚೆಲುವು–
ಎಂಬಂತೆ ನಿಲುವು !

ಬಣ್ಣ ಬಣ್ಣದ ಉಜ್ವಲ ತೋರಣವನ್ನು ಕಂಡ ಕವಿಯ ಮನಕ್ಕೆ ಸುಖದ ಆಗಮನವಾದಂತಿದೆ.

ಬೆಂದೆದೆಯ ಕಠಿನಶಿಲೆ
ನೋಡುತಿರೆಯಿರಿ ಕರಗಿಹೋದಾನಂದ ರಸ
ಉಕ್ಕಿ ಹರಿಯಿತು ಅಲೆ ಅಲೆ !

ನೋವು ಕರಗಿ ಆನಂದರಸ ಉಕ್ಕಿ ಹರಿದ ಬಗೆ ಜೀವನದ ಪ್ರಗತಿಗೆ ಹೇಗೆ ಸ್ಫೂರ್ತಿಯಾಗಿದೆ, ಬದುಕಿಗೆ ಭರವಸೆ ನೀಡುತ್ತದೆ ಎಂಬುದರ ಚಿತ್ರಣ ಸೊಗಸಾಗಿ ಮೂಡಿದೆ.

**'ಕನ್ನಡಿಯ ಕಿಚ್ಚು'** ಕವನಸಂಕಲನದ **'ಮಳೆ'** ಕವನವು ಸ್ವಾರ್ಥ ಮಾನವ ಪ್ರಕೃತಿಯ ಮೇಲೆ ಎಸಗುತ್ತಿರುವ ಅತ್ಯಾಚಾರದಿಂದಾಗಿ ಋತುಗಳಲ್ಲಿ ವ್ಯತ್ಯಾಸವಾಗುತ್ತಿದ್ದು ಪರಿಸರದಲ್ಲಿ ಅಸಮತೋಲನ ಉಂಟಾಗುತ್ತಿದೆ. ಆದರಿಂದ ಮನುಷ್ಯ ಜೀವನಕ್ಕೆ ಒದಗುತ್ತಿರುವ ಸಂಕಷ್ಟವನ್ನು ವ್ಯಂಗ್ಯ, ವಿಡಂಬನೆಗಳ ಮೂಲಕ ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ.

**ಈಗೀಗ ಮಳೆಯೂ**
**ರಾಜಕೀಯ ಕಲಿತಿದೆ !**

ಎಂಬ ವ್ಯಂಗ್ಯ ಹಾಸ್ಯದಿಂದ ಕವಿತೆ ಆರಂಭವಾಗುತ್ತದೆ.

ಇಂದು ಮಳೆಯ ಬರುವಿಕೆ ಹೇಗಿದೆಯೆಂದರೆ ಪಕ್ಕದ ಊರಿನಲ್ಲಿ ಮಳೆಯಾದರೆ ಈ ಊರಿನಲ್ಲಿಲ್ಲ, ಅಷ್ಟೇ ಏಕೆ ಆಚೆಯ ಬೀದಿಗೆ ಬಂದರೆ ಈಚೆಯ ಬೀದಿಗೆ ಇಲ್ಲ

**ನಗರದ ಒಂದು ಬಡಾವಣೆಯಲ್ಲಿ ಬಿರುಗಾಳಿ**
**ಜಡಿಮಳೆ, ವಿದ್ಯಾ ದೀಪಗಳಾರಿ ಕಗ್ಗತ್ತಲು ;**
**ಇನ್ನೊಂದು ಬಡಾವಣೆಯಲ್ಲಿ ಝಗಝಗಿಸುತ್ತದೆ ದೀಪಾರಾಜಿ**
**-ಎಲ್ಲ ಮಾಮೂಲು !**

ಪಟ್ಟಣದಲ್ಲಿ ಸುರಿದು ನಾಗರಿಕರ ಶಾಪಕ್ಕೆ ಗುರಿಯಾಗುವ ಮಳೆ, ಹಳ್ಳಿಯ ಕೃಷಿಕನಿಗೆ ಅವಶ್ಯಕವಾಗಿರುವ ಸಂಧರ್ಭದಲ್ಲಿ ಆತ **'ಮಳೆರಾಯ'**ನಿಗೆ ಹುಯ್ಯಲಿಟ್ಟರು ಬೀಳುವುದಿಲ್ಲ, ಭೂಮಿ ತಣಿಯುವುದಿಲ್ಲ.

**ಆಕಾಶದಲ್ಲಿ ಕವಿಯುತ್ತದೆ ಮೋಡಗಳ**
**ಕಪ್ಪು ಭರವಸೆ;**
**ಆದರೆ ಬಹಳ ಸಲ ಕಾರ್ಯರೂಪಕ್ಕಿಳಿಯುವುದೇ ಇಲ್ಲ;**
**ಬಿರುಕು ಬಿಡುತ್ತವೆ ಎದೆಯಾಸೆ !**

ರಾಜಕಾರಣಿಗಳು ಆಶ್ವಾಸನೆ ನೀಡುತ್ತಾರೆ, ಜನ ಅವು ಕಾರ್ಯರೂಪಕ್ಕೆ ಬರುತ್ತವೆಂದೇ ನಂಬುತ್ತಾರೆ, ನಂಬುತ್ತಿದ್ದಾರೆ. ಹಾಗೆಯೇ ಮೋಡಗಳು ಸಹ ಮಳೆ ಬರುತ್ತದೆ ಎಂಬ 'ಭರವಸೆ' ನೀಡುತ್ತವೆ ಆದರೆ ಅದು ಕಾರ್ಯರೂಪಕ್ಕಿಳಿಯುವುದಿಲ್ಲ. ಮಳೆಬಂದು, ನೆಲತಣಿದು,ಹಸಿರು ಕಾಣುವ ಬಯಕೆ ಹೊಂದಿದ್ದ ಮನದಾಸೆ ಬಿರುಕು ಬಿಡುತ್ತದೆ.

"ಸಾಲಕ್ಕೆ ಹೋದ ಮಳೆರಾಯ" ಅದನ್ನೆಲ್ಲ ತಾನೇ ನುಂಗಿ ನೀರು ಕುಡಿಯುತ್ತಾನೆ ಎಂಬ ಸಾಲು ಪ್ರಸ್ತುತ ವ್ಯವಸ್ಥೆಯಲ್ಲಿನ ನುಂಗಣ್ಣ ರಾಜಕಾರಣಿಗಳ ಪ್ರತೀಕವಾಗಿ ತಂದಿರುವುದು ಸೂಕ್ತವಾಗಿದೆ.

ಹೀಗೆ ಪ್ರಕೃತಿಯ ಮೇಲಿನ ದಾಳಿಯಿಂದಾಗಿ ಸಮತೋಲನ ತಪ್ಪಿ ಮನುಷ್ಯ ತೊಂದರೆಗೊಳಗಾದರೂ ಆತ ಬುದ್ಧಿ ಕಲಿಯುತ್ತಿಲ್ಲ. ಆದ್ದರಿಂದ ಪ್ರಕೃತಿಯೇ ಪಾಠ ಕಲಿಯುತ್ತದೆ.

**ಈಗ ಪ್ರಕೃತಿಯಿಂದ ಮನುಷ್ಯ ಪಾಠ ಕಲಿಯುವುದಿಲ್ಲ;**
**ಮನುಷ್ಯರಿಂದ ಕಲಿಯುತ್ತದೆ ಪ್ರಕೃತಿ;**

ಈ ಸಾಲುಗಳಲ್ಲಿ ಮನುಷ್ಯ ಸ್ವಭಾವವನ್ನು ನೇರವಾಗಿ ಖಂಡಿಸಿರುವುದು ತಿಳಿಯುತ್ತದೆ.

**'ತಾರಾಸಖ'** ಕವನ ಸಂಕಲನದ **'ಜಯಾಪಜಯ'** ಕವನವು ಮನುಷ್ಯ ನಾಗರಿಕತೆ ಮತ್ತು ಪ್ರಕೃತಿಯ ನಡುವಿನ ಹೋರಾಟದ ಚಿತ್ರಣವನ್ನು ನೀಡುತ್ತದೆ. ಪ್ರಕೃತಿಯನ್ನು ತನ್ನಿಷ್ಟಕ್ಕೆ ಅನುಗುಣವಾಗಿ ಬಳಸಿಕೊಳ್ಳುವ ಸ್ವಾರ್ಥದಿಂದ ವೈಜ್ಞಾನಿಕತೆಯ ಬಲದೊಂದಿಗೆ ತನ್ನ ಸರ್ವನಾಶಕ್ಕೆ ತಾನೇ ಸೃಷ್ಟಿಕರ್ತನಾಗಿ, ಗೆಲುವಿನ ನಾಗಾಲೋಟದಲ್ಲಿ ಸಾಗುತ್ತಾ ತನಗರಿಯದಂತೆ ಸೋಲನ್ನು ಅಪ್ಪಿಕೊಳ್ಳುತ್ತಿದ್ದಾನೆ. ಅಷ್ಟೇ ಅಲ್ಲ ಪ್ರಕೃತಿಯ ಮೇಲೆ ದಾಳಿ ಮಾಡುತ್ತಿರುವ, ಪ್ರಕೃತಿಯನ್ನು ನಿಯಂತ್ರಿಸಲು ಹವಣಿಸುತ್ತಿರುವ, ಜಯ ಸಾಧಿಸಲು ಹೊರಟದ ಮನುಷ್ಯನಿಗೆ ತನ್ನನ್ನು ತಾನು ನಿಯಂತ್ರಿಸಿಕೊಳ್ಳುವ ಶಕ್ತಿ ಇಲ್ಲ. ಜಯಿಸಲು ಸಾಧ್ಯವಿಲ್ಲ ಎಂಬುದನ್ನು ಅನೇಕ ಅಂಶಗಳಿಂದ ಈ ಕವನದಲ್ಲಿ ಸ್ಪಷ್ಟಪಡಿಸಿದ್ದಾರೆ.

**ಹಿಮಾಲಯದ ತುದಿ ಮುಟ್ಟಿ ಎಲ್ಲರನ್ನು ಬೆರಗುಗೊಳಿಸಿದ ಮನುಷ್ಯ–**
**ತನ್ನೆದೆಯ ಎತ್ತರದ ರಾಗ ಮೋಹಾದಿಗಳ**
**ಪರ್ವತಾರೋಹಣಕ್ಕೆಳಸಲೊಲ್ಲ.**

ಹಾಗೆಯೇ ಭೂಮಿ, ಕಡಲಿನ ಆಳವನ್ನಳೆದ ಮನುಷ್ಯ ತನ್ನ ಮನದಾಳವನ್ನು ಅರಿಯಲಾರ.

**ಗಾಳಿಯನು ಗೆದ್ದು ಹದ್ದಿನ ತೆರದಿ ಗಗನದಲಿ**
**ಹಾರಾಡಿ ಬೇರೆ ಗ್ರಹ ಸೇರಬಲ್ಲ,**
**ದೇಹ ಮೇಲೆದ್ದರೇನ್, ಕಿಲ್ಬಿಷವು ಮೆತ್ತಿರುವ**
**ಮನವ ಕೆಸರಿಂದ ಮೇಲೆತ್ತಲಾರ. –**

ಈ ಪದ್ಯವು ಮನುಷ್ಯ ಎತ್ತರಕ್ಕೆ ಏರಿ ಸ್ವತಂತ್ರವಾಗಿ ಹಾರಾಡಿದರು ಕೆಸರಲ್ಲಿ ಬಿದ್ದ ಮನಸ್ಸನ್ನು ಮೇಲೆತ್ತಿ ಶುದ್ಧಗೊಳಿಸಿಕೊಳ್ಳಲಾರ ಎಂಬುದನ್ನು ತಿಳಿಸುತ್ತದೆ.

ಚಲಿಸುತ್ತಿರುವ ನದಿಗೆ ಅಣೆಕಟ್ಟು ಕಟ್ಟಿ ತಡೆದು ನಿಲ್ಲಿಸಿದವನು ತನ್ನೊಳಗೆ ಉಕ್ಕಿ ಹರಿಯುವ ಭಾವಗಳನ್ನು ತಡೆಯಲು ಬಯಸುವುದಿಲ್ಲ. ಪ್ರಕೃತಿಯ ಸಂಪತ್ತಾದ ಕಾಡನ್ನು ಕಡಿದು ಬರಿದು ಮಾಡುತ್ತಿರುವ ಮನುಷ್ಯ ತನ್ನೊಳಗಿರುವ ದುರ್ಗಮ ಅರಣ್ಯವನ್ನು ಬರಿದು ಮಾಡಿಕೊಳ್ಳಲು ತಿಳಿದಿಲ್ಲ. ತಂತ್ರಜ್ಞಾನವನ್ನು ಬೆಳೆಸುತ್ತಿರುವವನು ತನ್ನನ್ನು ತಾನರಿಯುವ ವಿಜ್ಞಾನವನ್ನು ತಿಳಿದಿಲ್ಲ.

**ಅಣುಬಾಂಬು, ಜಲಜನಕ ಬಾಂಬು, ಕೊಬಾಲ್ಟ್ ಬಾಂಬು–**
**ಸರ್ವನಾಶದ ವಿದ್ಯೆ ಕೈಯೊಳಹುದು.**
**ಕರಣಗಣವನು ಜಯಿಸಿ ತನ್ನ ತಾನೇ ಗೆಲುವ**
**ಶ್ರೇಷ್ಠ ವಿದ್ಯೆಯು ಮಾತ್ರ ದೂರವಹುದು.**

ವೈಜ್ಞಾನಿಕ ಅನ್ವೇಷಣೆಯಿಂದ ಕಂಡು ಹಿಡಿದ ಬಾಂಬ್‌ಗಳು ಇಡೀ ಸೃಷ್ಟಿಯನ್ನೇ ಕ್ಷಣ ಮಾತ್ರದಲ್ಲಿ ನಾಶ ಮಾಡುವಂಥವು. ಆದರೆ ತನ್ನನ್ನು ತಾನು ಗೆಲ್ಲುವ ವಿದ್ಯೆ ಮಾತ್ರ ಇನ್ನು ತಿಳಿದಿಲ್ಲ.

ಜೀವ ಸಂಕುಲದಲ್ಲೇ ಬುದ್ಧಿವಂತನಾದ ಮನುಷ್ಯ ತಾನು ಗೆದ್ದೆ ಎಂಬ ಅಹಂಕಾರದಲ್ಲಿ ಬೀಗುತ್ತಿದ್ದಾನೆ. ಆದರೆ ಸಾಧಿಸಿದ ಜಯಕ್ಕಿಂತ ಸಾಧಿಸಬೇಕಾದ ಜಯ ನೂರುಮಡಿ ಇದೆ ಎಂಬುದನ್ನು ಹೇಳಿದ ಕವಿ ಅವನ ಅಹಂಕಾರಕ್ಕೆ ಪೆಟ್ಟು ನೀಡಿದ್ದಾರೆ.

**'ತಾರಾಸಖ'** ಕವನ ಸಂಕಲನದ **'ಇಲ್ಲಿ ಏನಿದೆ'**? ಕವನವು ಮಕ್ಕಳ ದುರ್ವಿದ್ಯೆಯಿಂದಾಗಿ ಪ್ರಕೃತಿ ಮಾತೆಯ ವೈಭವ ಕುಸಿದು ಪಾತಾಳಕ್ಕಿಳಿಯುತ್ತಿರುವ ದೃಶ್ಯವನ್ನು ಚಿತ್ರಿಸುತ್ತ ಭವಿಷ್ಯದ ನಾಶದ ಸೂಚನೆಯನ್ನು ನೀಡಿದ್ದಾರೆ.

ನಿಸರ್ಗಾವಲಂಬಿಯಾದ ಮನುಷ್ಯ ಅದರ ಬೆರಗು, ಸೌಂದರ್ಯಕ್ಕೆ ಮನಸೋತ್ತಿದ್ದಾನೆ. ಅದನ್ನು ಹಾಡಿ ಹೊಗಳಿ ಸ್ವರ್ಗಕ್ಕೆ ಹೋಲಿಸಿದ್ದಾರೆ.

**ಸ್ವರ್ಗವಿದು, ವೈಕುಂಠವಿದು ಎನು –**
**ತೆಲ್ಲ ಹಾಡಿದ ಕವಿಗಣ**
**ಸುಳ್ಳಿನೌತನದಿಕ್ಕಿತಿಲ್ಲಿದೆ**
**ಬರಿಯ ದೆವ್ವದ ದಿಬ್ಬಣ**

ಆದರೆ ಸ್ವಾರ್ಥ ಮಾನವ ಆ ಸ್ವರ್ಗವನ್ನು ದೆವ್ವದ ದಿಬ್ಬಣವನ್ನಾಗಿ ಮಾಡಿದ್ದಾನೆ. ಎಲ್ಲ ಸಂಪತ್ತನ್ನು ದೋಚುತ್ತಿದ್ದಾನೆ.

**ನೀರೊ ನೆರಳೋ ಏನು ಸಿಗುವುದು ?**
**ಮರಳುಗಾಡಿನ ರಿಂಗಣ !**
**ಪಥದಲೆಲ್ಲಿವೆ ಸಾಲುಮರ ? ಬಿರು –**
**ಬಿಸಿಲು ಬಡಿವುದು ರಣರಣ !**

ನಾಗರಿಕತೆಯ ಹೆಸರಿನಲ್ಲಿ ಅಭಿವೃದ್ಧಿ ಬಯಸಿದ ಮಾನವ ಫಲವತ್ತಾದ ಭೂಮಿಯನ್ನು ಮರಳುಗಾಡು ಮಾಡುತ್ತಿದ್ದಾನೆ. ನೀರು, ನೆರಳು ಕೂಡ ಸಿಗದಂತ ದುಃಸ್ಥಿತಿಗೆ ತನ್ನನ್ನು ತಾನು ದೂಡಿಕೊಳ್ಳುತ್ತಿದ್ದಾನೆ.

**ನೋಟ ಸಂತೋಷವನು ತರುವುದೆ ?**
**ಆಜ್ಯ : ಬೇಸರ ಜ್ವಾಲೆಗೆ !**
**ಬೋಳು ಒಣಮರ ನೋಡಿದರೆ ಆ–**
**ಹ್ಲಾದವೇ ಕಣ್ಣಾಲಿಗೆ ?**

ಎಂಬ ಸಾಲುಗಳು ನಿಸರ್ಗದ ಸೊಬಗನ್ನು ಸವಿಯುತ್ತ ಎಂಥ ನೋವನ್ನಾದರೂ ಮರೆಯಬುಹುದು, ಅಂಥ ಅದ್ಭುತ ಶಕ್ತಿ ಅದಕ್ಕಿದೆ. ಆದರೆ ಆ ಸೊಬಗು ಮನುಷ್ಯನಿಂದ ಸೂರೆಗೊಂಡ ನಂತರ ಉಳಿದ ಸ್ಥಿತಿಯಿಂದ ಸಂತೋಷವೂ ಇಲ್ಲ! ಆಹ್ಲಾದವೂ ಇಲ್ಲ ಎಂಬ ವಾಸ್ತವ ಸತ್ಯವನ್ನು ಕಟ್ಟಿಕೊಟ್ಟಿದ್ದಾರೆ.

**ಈ ವಿಕಾರತೆಗೇನು ಕಾರಣ :**
**ತನ್ನ ಮಕ್ಕಳ ನೀತಿಯು !**
**ಹೆತ್ತ ತಾಯಿಯ ಕೊಲುವ ಕೃತ್ಯಕೆ**
**ಹೇಸುವುದೆ ನರಜಾತಿಯು ?**

**ನಿಂತ ತಂತಿಯ ಕಂಬ ಭೂಮಿಯ**
**ಎದೆಗೆ ಚುಚ್ಚಿದ ಶೂಲವು**
**ಕೊಚ್ಚಿದರು, ಪರಚಿದರು, ಕೊರೆದರು –**
**ಕಪಿಯೆ ಇವರಿಗೆ ಮೂಲವು ! –**

ಈ ಸಾಲುಗಳು ಮನುಷ್ಯನ ಅಮಾನವೀಯತೆ, ಕ್ರೂರತೆಗೆ ಹಿಡಿದ ಕನ್ನಡಿಯಂತಿವೆ. ಕಾಪಾಡಬೇಕಾದ ಮಕ್ಕಳೇ ಅವಳ ಸಾವಿಗೆ ಕಾರಣವಾಗಿದ್ದಾರೆ. ತಾಯಿಯ ಮುಂದೆ ಮಕ್ಕಳು ಕೆಟ್ಟದಾರಿ ಹಿಡಿದರೆ ಅದಕ್ಕಿಂತ ದೌರ್ಭಾಗ್ಯ ಉಂಟೆ ! ?

**ಮಕ್ಕಳಿಗೆ ತಾಯಿರದೆ ಕ್ಷೇಮವೆ ?**
**ಬೇರನುಳಿದರೆ ವೃಕ್ಷಕೆ**
**ಉಂಟೆ ಜೀವನ ? ಮುಂದೆ ಬರಲಿಹ**
**ಯಾವ ನಾಶಕೊ ಪೀಠಿಕೆ !**

ಈ ಸಾಲುಗಳು ಕವಿತೆಯ ಆಶಯವನ್ನು ಪರಿಣಾಮಕಾರಿಯಾಗಿ ಧ್ವನಿಸುತ್ತವೆ. ಇದನ್ನು ಅರ್ತಮಾಡಿಕೊಂಡು ಮನುಷ್ಯ ಮುಂದಿನ ಹೆಜ್ಜೆ ಇಡಬೇಕಾಗಿದೆ.

**'ತಾರಾಸಖ'** ಕವನ ಸಂಕಲನದ **'ಮತ್ತೆ ನಿನ್ನ ಚರಣಕೆ !'** ಕವನದಲ್ಲಿ ಪ್ರಕೃತಿಯ ಅಂಶವನ್ನು ಜೀವನಕ್ಕೆ ಹೋಲಿಕೆ ನೀಡಿದ್ದಾರೆ. ಮೋಡ ನೀರಾಗಿ ಮತ್ತೆ ಮೋಡವಾಗುವ ಬಗೆಯಲಿ ಜೀವನ ಚಕ್ರದ ವಿವಿಧ ಹಂತಗಳನ್ನು ಕಂಡಿದ್ದಾರೆ. ಜೊತೆಗೆ ಅಧ್ಯಾತ್ಮಿಕ ಸಿದ್ಧಿಯ ಬಗೆಯನ್ನು ತಿಳಿಸಿದ್ದಾರೆ.

ಮೋಡ ಕರಗಿ ಮಳೆಯಾಗಿ ಭೂಮಿಗಿಳಿದು ನೂರು ರೂಪ ಪಡೆಯುವಂತೆ ಮನುಷ್ಯರು ಸಹ ಹುಟ್ಟಿದ ನಂತರ ಏಳುಬೀಳುಗಳನ್ನು ಅನುಭವಿಸುತ್ತಾನೆ.

**ಕೊಳದ ಕೆರೆಯ ಸರೋವರದ**
**ಮೇಪಗಳನು ತೊಟ್ಟೆ:**
**ಕಡಲಿಗಾಸೆಪಟ್ಟೆನು ! –**

ಹಂತ ಹಂತವಾಗಿ ಮೇಲೇರಿದಂತೆ ಆಸೆಗಳು ಬೆಳೆಯುವ ಬಗೆ ಇಲ್ಲಿದೆ. ಜೀವನದಲ್ಲಿ ಒಮ್ಮೆ ಉತ್ಸಾಹ, ಜಯ, ಸಂತೋಷ ದೊರೆತರೆ, ಮತ್ತೊಮ್ಮೆ ನೋವು, ನಿರಾಸೆ, ದುಃಖ ಲಭಿಸುತ್ತದೆ. ಇದರಿಂದ ಜೀವನೋತ್ಸಾಹದ ಗತಿ ಬದಲಾಗುತ್ತದೆ.

**ಒಮ್ಮೆ ಮಂದವಾಗಿ ಹರಿದು**
**ಒಮ್ಮೆ ಅಬ್ಬಿಯಾಗಿ ಮೊರೆದು**
**ಭೋರ್ಗರೆಯುತ ಉರುಳಿದೆ,**
**ಶರಧಿಯೆದೆಗೆ ತೆರಳಿದೆ ! –**

ಏನಾದರಾಗಲಿ ಗುರಿ ಮುಟ್ಟುವ ಪ್ರಯತ್ನದ ಜೊತೆಗೆ ಸಾರ್ಥಕತೆ ಪಡೆಯುವುದು ಮುಖ್ಯವಾಗುತ್ತದೆ ಎಂಬುದನ್ನು ತಿಳಿಸಿದ್ದಾರೆ.

**ಯಾವ ಗತಿಯೊಲದ್ದರೇನು ?**
**ನಿಲುಗಡೆಯೆನೆ ಕಾಣೆನು ;**
**ಎನಿತು ಆಟವಾಡಿದರೂ**
**ಕಡೆಗೆ ನಿನಗೆ ಶರಣನು ! –**

ಜೀವನ ಚಕ್ರ ನಿತ್ಯನಿರಂತರ, ಕೊನೆಯೆಂಬುದಿಲ್ಲ. ಏನೇ ಆಟ ಆಡಿದರೂ ಕೊನೆಗೆ ನಿನಗೆ ಶರಣಾಗಲೇಬೇಕು ಎಂಬ ಘನ ತತ್ವ ರಸವತ್ತಾಗಿ ಮೂಡಿ ಬಂದಿದೆ.

ನಿನ್ನ ಕರುಣೆಯಿಂದಲೇ ಈ ಜೀವನ ಅದೇ ಕರುಣ ಸೂರ್ಯ ಕಿರಣವಾಗಿ ಕರೆದ ಸಂದರ್ಭದಲ್ಲಿ

**ಆವಿಯಾಗಿ ಕುದಿವೆನು**
**ಆಗಸಕ್ಕೆತರುವೆನು:**
**ಮತ್ತೆ ಮುಗಿಲಿನಾ ಕೃತಿಯಲಿ**
**ನಿನ್ನ ಬಳಿಗೆ ಬರುವೆನು ! –**

ಎಂಬ ದೈನ್ಯ ನಿವೇದನೆ ಇಲ್ಲಿದೆ.

ಪ್ರಕೃತಿಯ ಮಡಿಲನ್ನೇ ಆಶ್ರಯಿಸಿ ಜೀವಿಸುತ್ತಿರುವ ಮನುಷ್ಯ ಅಲ್ಲಿನ ಸೃಷ್ಟಿ ವೈಚಿತ್ರ್ಯ ಸೌಂದರ್ಯಕ್ಕೆ ಬೆರಗಾಗಿದ್ದಾನೆ. ಅದರಲ್ಲೇ ತನ್ನ ಜೀವನ ಸಂತೋಷವನ್ನು ಕಾಣುತ್ತಿದ್ದಾನೆ. ಮಧುರ ಅನುಭವಗಳನ್ನು ತನ್ನದಾಗಿಸಿಕೊಂಡು ಆ ನೆನಪುಗಳಲ್ಲೇ ಆನಂದ ಪಡುತ್ತಿದ್ದಾನೆ. ಇವೆಲ್ಲ ನಾಗರಿಕತೆಯ ಜಂಜಡದಿಂದ ದೂರವಿರುವಲ್ಲಿ ಮಾತ್ರ. ಕವಿ ಅದನ್ನು ಕಂಡಿರುವುದು ಒಂದು ಪುಟ್ಟ ಹಳ್ಳಿಯಲ್ಲಿ. ಆ ಹಳ್ಳಿಯಲ್ಲಿ ತಮಗಾದ ಅನುಭವದ ರಸದೌತಣವನ್ನು **'ಅನಂತ–ಪೃಥ್ವೀ'** ಕವನ ಸಂಕಲನದ **'ನವಿಲು'** ಕವನದಲ್ಲಿ ಉಣಬಡಿಸಿದ್ದಾರೆ.

**ನೂರು ನೆನಪಿನ ನವಿಲು ಕೊಂಡೊಯ್ಯುತಿವೆ ಮನವ**
**ಅಂದು ವಿಹರಿಸಿ ನಲಿದ ರಸರಂಗಕೆ:**
**ಹತ್ತು ದಿಕ್ಕಿಗೆ ಚದುರಿ ಬದುಕಿನಲಿ ತೊಡಗಿರುವ**
**ಹಳೆಯ ಗೆಳೆಯರ ಮಧುರ ಚಿರಸಂಗಕೆ**

ಬಾಲ್ಯ ಜೀವನವನ್ನು ಹಳ್ಳಿಯಲ್ಲಿ ಪ್ರಕೃತಿಯ ಸೊಬಗಿನ ಮಧ್ಯೆ ಕಳೆದ ಸಂದರ್ಭವನ್ನು ಸ್ಮರಿಸುತ್ತ ನಾಗರಿಕತೆಯ ನೆವದಲ್ಲಿ ಒತ್ತಡದ ಬದುಕು ನಡೆಸುವ ಭರದಲ್ಲಿ ಆ ಸೊಬಗಿನಿಂದ ದೂರ ಉಳಿದಿರುವುದು ವಿಷಾಧವೇ ಸರಿ. ಹಸುರು ತೊಟ್ಟಿಲು, ಹಕ್ಕಿಗೊರಲಿನ ಮೇಳ, ಗೆಳೆಯರೊಂದಿಗೆನ ಆಟ, ಬದುಕ ಕಟ್ಟುವ ಅಜ್ಜಿಯ ಕಥೆಗಳು, ಬೆಳದಿಂಗಳು, ಮುದ ನೀಡುವ ನೀಲಾಗಸದ ವಿವಿಧ ಚಿತ್ರಪಟಗಳು, ವಿವಿಧ ಆಕಾರದಿ ರಂಜಿಪ ಮೋಡಗಳು, ರಾತ್ರಿಯಾಗಸದ ಚಂದ್ರ, ತಾರೆ, ಹಗಲೆಲ್ಲ ಕುಣಿದು ನಿದ್ದೆಗೆ ಶರಣಾದಾಗ ಸ್ವಪ್ನ ಸಿರಿಯ ಮುದ್ದಾಟ ಎಲ್ಲವನ್ನು ಅನುಭವಿಸುತ್ತಾ ಸೌಂದರ್ಯ

ಮಧುಪಾನಮತ್ತನಾಗಿ ಯಾವುದೋ ಶಕ್ತಿ ಇಡೀ ಜಗತ್ತನ್ನಾಳುತ್ತಿದೆ ಎಂದರಿತು ಕೈ ಮುಗಿದು ಶರಣಾಗಿ ಸಂತೋಷದ ಜೀವನ ನಡೆಸುತ್ತಿರಲು –

**ಶಾಂತಿ ರಾಜ್ಯದೊಳಿಂತು ನಾನು ಪ್ರಜೆಯಾಗಿರಲು**
**ಘೋರವಿಪ್ಲವವೊಂದು ಸಿಡಿದೆದ್ದಿತು:**
**ಸೃಷ್ಟಿಯಲಿ ತೀವ್ರ ಪರಿವರ್ತನೆಗಳುನ್ನು ಕಂಡೆ:**
**ನನಗೆ ಹೊಸತೇ ಜನ್ಮ ದೊರಕೊಂಡಿತು........**

ಹೀಗೆ ಮನುಷ್ಯನ ನಾಗರಿಕತೆಯ ಪರಿಣಾಮದ ಫಲದಿಂದಾಗಿ ನಿಸರ್ಗದ ನಾಶ, ಅದರಿಂದಾಗಿ ಪ್ರಕೃತಿ ಸೌಂದರ್ಯದಿಂದ ವಂಚಿತರಾಗಿ ಜೀವನದ ರಸ ನಿಮಿಷಗಳು ದೂರವಾಗುತ್ತಿರುವುದನ್ನು ಕವಿ ಸುಂದರ ಉದಾಹರಣೆಗಳ ಮೂಲಕ ತಿಳಿಸಿದ್ದಾರೆ. ಇಲ್ಲಿ ಕವಿಯ ಸೌಂದರ್ಯ ಪ್ರಜ್ಞೆ ಮತ್ತು ಅದರ ಪರಿವರ್ತನೆಯ ಪರಿಣಾಮಕ್ಕೆ ಆತಂಕ ವ್ಯಕ್ತ ಪಡಿಸಿದ್ದಾರೆ.

ಹೂವು ಪ್ರೀತಿಗೆ, ಮೃದುತ್ವಕ್ಕೆ, ಅಭಿವೃದ್ಧಿಗೆ ಸಂಕೇತ. ಕಾಯಾಗಿ, ಮೊಗ್ಗಾಗಿ ನಂತರ ಅರಳಿ ಹೂವಾಗಿ ಕಂಪನ್ನು ಪಸರಿಸಿ ಚೈತನ್ಯ ನೀಡುತ್ತದೆ. ಆದರೆ ಸ್ವಾರ್ಥ ಮನುಷ್ಯ ಎಲ್ಲವನ್ನು ಕಬಳಿಸುತ್ತ ನಾಳೆ ಅರಳಿ ಪರಿಮಳ ಬೀರಿ ಸುಗಂಧವನ್ನು ನೀಡುವ ಮೊಗ್ಗನ್ನು ಇಂದೇ ಕೊಯ್ದು ಹೊಸಗುವ ಕ್ರೂರ ಕೃತ್ಯಕ್ಕೆ ಕೈ ಹಾಕುತ್ತಾನೆ. ಕವಿ ಅದನ್ನು ತಡೆಯುವ ಪ್ರಯತ್ನವನ್ನು **'ಕೇಡ ಬಗೆಯದಿರು'** ಕವನದಲ್ಲಿ ಮಾಡಿದ್ದಾರೆ.

**ನಾಳೆ ಇದರ ವಿಕಾಸ; ಆ ಸತ್ತ್ವ ಪ್ರಕಾಶ–**
**ಈಗಲೇ ಸಾಧಿಸುವೆಯೇನದರ ನಾಶ?**
**ಪರಿಮಳವ ಕುರಿತೇಕೆ ಇಂತು ಮತ್ಸರ ನಿನಗೆ;**
**ಈ ವಿಗಡತನ ನಿನ್ನ ಸಹಜ ಗುಣವೆ? –**

ಎಂದು ಪ್ರಶ್ನಿಸುತ್ತಾ ನಿಸರ್ಗವನ್ನು ನಿಸ್ಸಾರಗೊಳಿಸುತ್ತಿರುವ ಮನುಷ್ಯನಿಗೆ ಮುಂದಿನ ಭೀಕರ ಪರಿಣಾಮವನ್ನು ತಿಳಿಸುತ್ತಾರೆ. ಕೊನೆಗೆ–

**ಸಾಕು ಸಾಕಿನ್ನು ನಿನ್ನಟ್ಟಹಾಸದ ಕೇಕೆ;**
**ಬಿಡು, ಅರಳಿ ಆಗಲಿದು ಸೌರಭಪತಾಕೆ !**
**ನರುಗಂಪು ಹತ್ತು ದಿಕ್ಕನು ತೀವಿ ಪಸರಿಸಲಿ;**
**ಕೇಡ ಬಗೆಯದಿರೆಲವೊ; ಬೇಡ, ಬೇಡ! –**

ಎಂಬ ಸಾಲುಗಳು ಕವಿತೆಯ ಆಶಯದ ಕೇಂದ್ರ ಬಿಂದುವಾಗಿದೆ.

**"ಕೇಡ ಬಗೆಯದಿರೆಲವೊ; ಬೇಡ, ಬೇಡ"** ಎಂಬ ಸಾಲಿನಲ್ಲಿ ಬೇಡ, ಬೇಡ ಎಂಬ ಮಾತಿನಲ್ಲಿ ಶ್ಲೇಷಾರ್ಥವಿದ್ದು, ನನೆಗಳನ್ನು ಕ್ರೂರವಾಗಿ ತರಿಯುತ್ತಿರುವವರನ್ನು 'ಬೇಡ'ನಿಗೆ ಹೋಲಿಸಿರುವುದು ಸೂಕ್ತವಾಗಿದೆ.

**'ಪ್ರಣಯ ಗೀತೆ'** ಕವನವು ಪ್ರಕೃತಿಯ ಪ್ರಣಯದ ವೈಭವವನ್ನು ವರ್ಣಿಸುವ ಅದ್ಭುತ ಗೀತೆಯಾಗಿದೆ, ಮನುಷ್ಯನ ಜೀವನದಲ್ಲಿ ಪ್ರೀತಿ ಪ್ರಣಯ ಬಹು ಮುಖ್ಯ ಪಾತ್ರ ವಹಿಸುತ್ತವೆ. ಆದರೆ

ಸಿ.ಪಿ.ಕೆ. ಅವರ ಪ್ರಕೃತಿಯ "ಪ್ರಣಯ ಗೀತೆ" ಮನುಷ್ಯನನ್ನೇ ನಾಚಿಸುವಂತಿದೆ ಮಾತ್ರವಲ್ಲ ನೋಡಿಕಲಿಯಲೇ ಬೇಕು ಎನ್ನುವಂತಿದೆ.

ತೊರೆ-ನದಿ, ನದಿ-ಸಮುದ್ರ, ಬೆಟ್ಟ-ಆಕಾಶ, ಸೂರ್ಯ-ಭೂಮಿ, ಚಂದಿರ-ಸಾಗರ, ಗಾಳಿ-ಮರ ಮುಂತಾದ ಪ್ರಕೃತಿಯ ಅನೇಕ ವಸ್ತುಗಳಲ್ಲಿ ಪರಸ್ಪರ ಇರುವ ಪ್ರೇಮವನ್ನು ಗುರುತಿಸಿ, ಅದರ ಸ್ಫೂರ್ತಿಯಿಂದಾಗಿಯೇ ಅವು ನಿರ್ದಿಷ್ಟವಾಗಿ ಕರ್ತವ್ಯ ನಿರ್ವಹಿಸುತ್ತಿವೆ ಎಂಬುದನ್ನು ತಿಳಿಸಿದ್ದಾರೆ.

**ಸುಳಿವ ತಂಗಾಳಿಯನು ಬರಸೆಳೆದು ಮುದ್ದಿಸಲು**
**ವೃಕ್ಷಗಳು ಬಾಹುಗಳ ಚಾಚಿ ಬಾಗುವುವು !**
**ಇಂತು ಪ್ರೇಮದ ಸ್ಫೂರ್ತಿಯಿಲ್ಲದಿರೆ ವಸ್ತುಗಳು**
**ಕರ್ತವ್ಯಪಥದಲ್ಲದೆಂತು ಸಾಗುವುವು ?**

**ಇಂತು ಅಂತ್ಯವ ಕಾಣದಿಹ ಪ್ರಣಯಗೀತೆಯನು**
**ಪ್ರಕೃತಿ ಬರೆಯುತ್ತಿಹಳು ಅನವರತವು –**
**ಆದರೀ ಗೀತೆಯನು ಓದುವವರತಿ ವಿರಳ ;**
**ಇದಕಿರುವ ಗುರಿಯೊಂದೆ: ಲೋಕಹಿತವು !**

ಆಧುನಿಕ ತಂತ್ರಜ್ಞಾನಕ್ಕೆ ಸೋತಿರುವ ಮನುಷ್ಯ ಪ್ರಕೃತಿಯ ಕೊಂಡಿಗಳನ್ನು ಒಂದೊಂದಾಗಿ ಕಳಚಿಕೊಳ್ಳುತ್ತಿದ್ದಾನೆ. ಇದರಿಂದ ತುಂಬಲಾರದ ನಷ್ಟವನ್ನು ಅನುಭವಿಸುತ್ತಿದ್ದಾನೆ. ಅದನ್ನು 'ನಷ್ಟ' ಕವಿತೆಯಲ್ಲಿ ಕಾಣಬಹುದಾಗಿದೆ. ಪ್ರಕೃತಿಯ ಅಂಶಗಳಾದ ಸೂರ್ಯ, ಗ್ರಹ, ತಾರೆಗಳು, ಕೋಳಿ, ನಾಯಿ ಮುಂತಾದವುಗಳಿಂದ ಕಾಲವನ್ನು ತಿಳಿಯುತ್ತಿದ್ದ ಮನುಷ್ಯ. ಇಂದು ಕೃತಕ ಗಡಿಯಾರಕ್ಕೆ ಮೊರೆ ಹೋಗುತ್ತಿದ್ದಾನೆ. ಗಡಿಯಾರ ಕೆಟ್ಟಾಗ ಅವನ ಫಜೀತಿ ಅಪಾರ.

ಸಾಕಿದ ನಾಯಿ ಸೋಮಾರಿಯಾಗಿ ಮಲಗಿದೆ (ಮನುಷ್ಯನಿಂದ ಅದು ಕಲಿತುಕೊಂಡಿತೇನೋ!). ಪಟ್ಟಣದಲ್ಲಿ ಕೋಳಿ ಕೂಗುವುದುಂಟೇ, ಕೂಗಿದರೂ ಮನುಷ್ಯನಿಗೆ ಅದನ್ನು ತಿಂದು ಮುಗಿಸುವ ಚಪಲ.

**ಹೀಗಾಗಿ – ಕಾಲದ ಪರಿವೆ ಕಷ್ಟವಾಗಿದೆ ನನಗೆ!**
**ಹಾಗೆಂದು ಗಡಿಯಾರದಂಗಡಿಯ ಮುಂದೆ ನಿಂತವರುಂಟೆ?**
**ನಿಂತು ಬದುಕುವುದುಂಟೆ?**
**ಅದು ಖಂಡಿತ ಹುಚ್ಚರಾಸ್ಪತ್ರೆ!**
**ಬೇಡ ಮಾರಾಯ.**

ಏಕತೆಯಿಲ್ಲದ ಗಡಿಯಾರಗಳಿಂದ ಕಾಲ ನಿರ್ಧರಿಸಲು ಸಾಧ್ಯವಿಲ್ಲ. ಮನುಷ್ಯನಿಗೆ ತಾನು ಸೃಷ್ಟಿಸಿದ್ದನ್ನು ತನ್ನಿಂದಲೇ ನಿಯಂತ್ರಿಸಿ ಸಮಾನತೆಯನ್ನು ಕಾಣಲು ಸಾಧ್ಯವಿಲ್ಲ.

**ಮತ್ತೇನು ಗತಿ ಮುಂದೆ ?**
**ಏನೆ–**
**ಸದ್ಯಕ್ಕೆ ಈ ತರಲೆ ಗಡಿಯಾರ, ಗಡಿಯಾರಗಳ ಹುಚ್ಚಾಸ್ಪತ್ರೆ,**
**ಗೋಪುರದ ಗಡಿಯಾರ, ರೇಡಿಯೋ ಗ್ರಹಣ**
**–ಇವೇ ನಮಗೆ ದಿಕ್ಕು !**
**ಆಕಾಶವನ್ನೆಲ್ಲ ಕಳೆದುಕೊಂಡಿದ್ದೇವೆ ;**
**ಈಗ ಉಳಿದಿಹುದೊಂದೆ: ನೆಲದ ಹಕ್ಕು !**

ಸಮಯ ನಿರ್ಧರಿಸಲು ಸಹಾಯವಾಗಿದ್ದ **'ಆಕಾಶ'** ನಷ್ಟವಾಗಿ ಹೋಗಿದೆ. ಇನ್ನು ಉಳಿದಿರುವುದು ಭೂಮಿ ಅದರ ಮೇಲೂ ಅವನ ಕಣ್ಣು ಬಿದ್ದಿದೆ. ಇನ್ನು ಅದೆಷ್ಟು **'ನಷ್ಟ'** ಅನುಭವಿಸಬೇಕೋ ಎಂಬುದನ್ನು ನಷ್ಟ ಕವಿತೆ ಚಿತ್ರಿಸಿದೆ.

**'ಕೋಗಿಲೆ ಮತ್ತು ಗಿಳಿ'** ಕವನದಲ್ಲಿ ಪ್ರಕೃತಿ ಮತ್ತು ಮನುಷ್ಯನ ಜೀವನದ ಸಂಬಂಧ ಕುರಿತು ಹೇಳಿದ್ದಾರೆ. ಒಮ್ಮೆ ಕಾಡಿನಲ್ಲಿರಬೇಕಾದ ಕೋಗಿಲೆ ಮತ್ತು ಗಿಳಿಯನ್ನು ನಾಡಿನಲ್ಲಿ ಕಂಡು ಬೆರಗಾದ ಕವಿ ಮನುಷ್ಯರು ಕಾಡನ್ನು ಸಹ ನಾಡನ್ನಾಗಿ ಪರಿವರ್ತಿಸುತ್ತಿರುವ ವಾಸ್ತವ ಸತ್ಯವನ್ನು ಚಿತ್ರಿಸಿದ್ದಾರೆ. ಕೋಗಿಲೆ ಮತ್ತು ಗಿಳಿಗಳು ತಾವು ಒಂಟಿಯೆಂದು ಭಾವಿಸಿರಬೇಕು ಎಂದುಕೊಳ್ಳುತ್ತಾ, ಹಾಗೇನಿಲ್ಲ ಜನ ಕೂಡ ಇದ್ದಾರೆ ಇವುಗಳ ಸುತ್ತ ಮುತ್ತ ಎನ್ನುತ್ತಾರೆ. ಕೋಗಿಲೆ ಮತ್ತು ಗಿಳಿಯನ್ನು ಜನರಲ್ಲಿ ಕಾಣುತ್ತಾರೆ.

**ಹಲವರ ಹೃದಯಗಳು ಕಪ್ಪು**
**ಥೇಟ್ ಕೋಗಿಲೆಯ ಹಾಗೆ**
**(ಕೆಲವರ ಮೈ ಬಣ್ಣವೂ ತುಸು ಹಾಗೆಯೆ.**
**ಆದರದು ತಪ್ಪಲ್ಲ).**
**ತಮ್ಮ ಮೊಟ್ಟೆಗಳನ್ನು ಅನ್ಯರಿಂದ ಮರಿ ಮಾಡಿಸುವ**
**ಚಾಲುಕು ಇವರಿಗೆ ಮಿಗಿಲು ;**
**ಆದರಿಷ್ಟೆ ವ್ಯತ್ಯಾಸ :**
**ಇವರಿಗಿಲ್ಲ ಕೋಗಿಲೆಯ ಕೊರಳು !**
**ಇನ್ನು ಹಲವರದು ಗಿಳಿ ಪಾಠ;**
**ಆದರೆ ಯಾರಿಗೂ ಇಲ್ಲ ಅದರ ಬಣ್ಣದ ಮಾಟ**

ಪ್ರಕೃತಿಯನ್ನು ಕಂಡು ಕರುಬಿದ ಮನುಷ್ಯ ಅದನ್ನು ಅನುಕರಿಸ ಹೊರಡುತ್ತಾನೆ. ಆದರೆ ನೈಸರ್ಗಿಕತೆ ಸಾಧ್ಯವಿಲ್ಲ ಎಂಬುದನ್ನು ಕವಿ ಇಲ್ಲಿ ವ್ಯಂಗ್ಯವಾಗಿ ಹೇಳಿದ್ದಾರೆ. ಪಾಪ ಮನುಷ್ಯನ ಈ ನೀತಿ ಅವುಗಳಿಗೆ ತಿಳಿದಿಲ್ಲ. ಅವು ನೆಮ್ಮದಿಯಿಂದಿರಲಿ ಎಂದು ಹೇಳುತ್ತಾ ಅವುಗಳನ್ನು ಕಂಡು ತಾವೂ ಆನಂದ ಪಡೆಯುವಾಸೆ ಹೊಂದಿದ್ದಾರೆ.

ಪ್ರಕೃತಿಯ ವಿನಾಶವೆಂದರೆ ಮನುಷ್ಯನ ವಿನಾಶವೇ ಸರಿ ಎಂಬುದನ್ನು **'ದುರಂತದ ಹಾಡು'** ಕವನದಲ್ಲಿ ನೋವು ನಿರಾಶೆಯೊಂದಿಗೆ ತಿಳಿಸಿದ್ದಾರೆ.

**ಎಲ್ಲಿ ಹೋದವೋ ಹಕ್ಕಿಗಳು,**
**ಎಲ್ಲಿ ಹೋದುವೋ ಹೂವುಗಳು,**
**ಎಲ್ಲಿ ಹೋಯಿತಾಕಾಶದ ನೀಲಿ,**
**ಹಸುರಿನ ವೈಹಾಳಿ? –**

ಎಂದು ಪ್ರಶ್ನೆ ಮಾಡಿದ್ದಾರೆ. ಮನುಷ್ಯ ಸುಖ, ಸ್ವಾರ್ಥ, ಆಸೆ-ಆಮಿಷಗಳಿಗೆ ಒಳಗಾಗಿ ವೈಜ್ಞಾನಿಕ ಮತ್ತು ತಂತ್ರಜ್ಞಾನದ ಭರಾಟೆಯಲ್ಲಿ ಪ್ರಕೃತಿಯನ್ನು ಹಂತ ಹಂತವಾಗಿ ವಿನಾಶದ ಅಂಚಿಗೆ ದೂಡುತ್ತಾ ಮುಂದಾಲೋಚನೆಯಿಲ್ಲದೆ ತನ್ನ ವಿನಾಶಕ್ಕೆ ದಾರಿಯನ್ನು ಸುಗಮಗೊಳಿಸಿ ಕೊಳ್ಳುತ್ತಿದ್ದಾನೆ. ಇದರಿಂದಾಗಿ –

**ದಿನ ದಿನ ಗಾಳಿಯ ಬೆಳಕಿನ ಕೊರತೆ,**
**ಬತ್ತುತಲಿರುವುದು ನೀರಿನ ಒರತೆ,**
**ಇನ್ನೆಲ್ಲಿರುವುದು ಬದುಕುವ ಆಸೆ ?**
**ಮಳೆ ಬೆಳೆಗಳೆ ಇಲ್ಲ,**
**ಆತ್ಮಹತ್ಯದಿ**
**ಅಳಿವೆವು ನಾವೆಲ್ಲ !**

ಇಲ್ಲಿ ಪ್ರಕೃತಿಯ ಮೇಲೆ ಮನುಷ್ಯನ ದಾಳಿ ಹೀಗೆ ಮುಂದುವರೆದರೆ ಬದುಕುವ ಆಸೆ ಬಿಟ್ಟು ಅಳಿವಿನ ಹಾದಿ ಹಿಡಿಯಬೇಕಾಗುವುದು ಎಂಬುದನ್ನು ನೇರವಾಗಿ ತಿಳಿಸಿದ್ದಾರೆ.

**'ಶೂನ್ಯ'** ಕವಿತೆ ಪ್ರಕೃತಿ ವಿನಾಶದ ಬಗ್ಗೆ ತಿಳಿಸುತ್ತದೆ. ಸಿ.ಪಿ.ಕೆ. ಅವರ ಹಲವಾರು ಕವನಗಳು ಪ್ರಕೃತಿ ವಿನಾಶ ಕುರಿತು ಚಿಂತಿಸುತ್ತವೆ. ಇದು ಅವರ ಪರಿಸರ ಪರ ಕಾಳಜಿಯನ್ನು ವ್ಯಕ್ತಪಡಿಸುತ್ತದೆ.

**ಏನಿದೇನಿದು, ಎಲಾ! ಈ ರೂಕ್ಷತೆಯ ನಡುವೆ**
**ಅಲ್ಲೊಂದು ಹಕ್ಕಿಗೂಡು !**
**ಯಾವ ಭರವಸೆ ಇದಕೆ ಊರುಗೋಲು ?**
**ಎಲೆಲೆ ಹಕ್ಕಿಯೆ, ಮನೆಯ**
**ಮಸಣದಲ್ಲೂ ಕಟ್ಟಿ ಹೂಡಿರುವೆ ಬಾಳು ;**
**ಇದು ಎಂಥ ಗೀಳು !**

**'ತಾರಾಸಖ'** ಕವನ ಸಂಕಲನದ **'ಈ ಭುವನವೆ ಶಿವನೈ !'** ಕವನವು ಇಡೀ ಭೂ ಮಂಡಲವೇ ಶಿವ ಸ್ವರೂಪ ಎಂದು ಶಿವ ಸಾಕ್ಷಾತ್ಕಾರವನ್ನು ಮಾಡಿಸುತ್ತದೆ. ಸತ್ಯ-ಶಿವ-ಸೌಂದರ್ಯಗಳ ತಾತ್ವಿಕತೆಯನ್ನು ಹೇಳುವಂತಿದೆ. ಇರುಳು ಭಯಂಕರ, ಭಾವಿಸುವ ಕಣ್ಣಿಗೆ ಮಾತ್ರ. ಕವಿ ಇಲ್ಲಿ ಇರುಳಿನಲ್ಲೂ ಶಿವನ ಸ್ವರೂಪವನ್ನು ಕಂಡು ಹೊಸತನವನ್ನು ಮೆರೆದಿದ್ದಾರೆ.

**ಭೂ ಗಗನವ ದಿಟ್ಟಿಸುತ್ತ**
**ಅಂದಿನ ಒಂದಿರುಳನು**
**ಚಣ ಸವಿದೆನು; ದೃಶ್ಯದಲ್ಲಿ**
**ಕಂಡೆ ಹಿರಿಯ ತಿರುಳನು !**

**ಮೌನದಿ ತೆರೆ ಅದ್ದಿದೊಲಿರೆ**
**ಏನೊ ಭಾವ ಸುಮಧುರ**
**ಉಕ್ಕಿ ಬಂತು; ನನ್ನ ಕಣ್ಗೆ**
**ಈ ಭುವನವೆ ಈಶ್ವರ !**

ಇಲ್ಲಿ ಕವಿಯ ಕಲ್ಪನೆ ಅನನ್ಯವಾಗಿದೆ. ಸವಿಯುವ ಮನಸ್ಸು ಬಹಳ ಮುಖ್ಯ. ಭೂಮಿಯನ್ನು ಮೌನ ಆವರಿಸಿದೆ. ಸುಮಧುರ ಭಾವನೆಗಳು ಹೊಮ್ಮುತ್ತಿವೆ. ಕಣ್ಣಿಗೆ ಇಡೀ ಭೂಮಿ ಶಿವನಾಗಿ ಕಂಡಿದೆ.

ಮನುಷ್ಯನೇ ಸೃಷ್ಟಿಸಿದ ಶಿವನ ರೂಪವನ್ನು ಇರುಳಿನಲ್ಲಿ ಕಂಡಿರುವುದು ಸಿಪಿಕೆ ಅವರ ಸೃಜನಶೀಲತೆಗೆ ಸಾಕ್ಷಿಯಾಗಿದೆ.

**ಮೇಲೆ ಬೆಳಗುವರ್ಧ ಚಂದ್ರ**
**ಶಿವನ ಮುಡಿ ಕಿರೀಟವು ;**
**ಸುತ್ತ ನೀರದಗಳ ಪುಂಜ**
**ಅವನ ಜಟಾಜೂಟವು !**

**ಮಿಣುಕುತಿರುವ ತಾರಾವಳಿ**
**ಅವನ ವ್ಯೋಮಕೇಶವು**
**ಧರಿಸಿಕೊಂಡ ಪುಷ್ಪನಿಚಯ –**
**ಜಗದ್ವಂದ್ಯ ವೇಷವು !**

ಹೀಗೆ ಶಿವನ ಚಿತ್ರ ಮನೋಹರವಾಗಿ ಮೂಡಿದೆ.

**ರಾತ್ರಿಯೆಂದು ಅಳುಕುತಿರಲು**
**ಅಹುದು ಹರ ಭಯಂಕರ.**
**ಕಾಣಬಲ್ಲ ಕಣ್ಣಿಗಹುದು**
**ನೋಟವೆಲ್ಲ ಶುಭಕರ !**

ಕಾಣುವ ಕಣ್ಣಿಗೆ ಕೆಟ್ಟದ್ದೆಂದುಕೊಂಡಿರುವುದು ಕೂಡ ಶುಭವಾಗಿಯೇ ಕಾಣುತ್ತದೆ. ಅದು ಒಳಿತನ್ನು ಕಾಣುವ ಮನಸ್ಸಿದ್ದಾಗ ಮಾತ್ರ. ಆ ಮನಸ್ಸು ಎಲ್ಲರದಾದರೆ ಪ್ರಕೃತಿಯ ಸೊಬಗು ಸ್ವಲ್ಪ ಮಟ್ಟಿಗಾದರೂ ಉಳಿಯಬಹುದೇನೋ!.

**'ಪ್ರಕೃತಿ'** ಕವನ ಸಂಕಲನದ **'ಪ್ರಕೃತಿ'** ಕವನದಲ್ಲಿ ಪ್ರಕೃತಿ ಮತ್ತು ಮನುಷ್ಯನ ಸಂಬಂಧವನ್ನು, ಪ್ರಕೃತಿಯ ಹಲವು ಮುಖಗಳನ್ನು ಬಣ್ಣಿಸುತ್ತ ಪ್ರಕೃತಿಯ ಶ್ರೇಷ್ಠತೆಯನ್ನು ಎತ್ತಿಹಿಡಿದಿದ್ದಾರೆ.

ಪ್ರಕೃತಿಯ ಮುಂದೆ ಮನುಷ್ಯನ ಆಟವೇನೂ ನಡೆಯುವುದಿಲ್ಲ. ತಾನೇ ಮೇಲೂ, ತನ್ನ ಕೈಕೆಳಗೆ ಎಲ್ಲವೂ ಎಂದೂ ಭ್ರಮಿಸಿದರೂ ಅದರ ಔನ್ನತ್ಯ ಅದಕ್ಕೆ ಮಾತ್ರ ಮೀಸಲು.

**ನಿನಗಿಂತ ನಾನೆ ಮೇಲೆಂದುಕೊಂಡಿದ್ದರೂ**
**ನೀನೆನ್ನ ಮುಂದೆ ಕೈಯೊಡ್ಡಿ ನಿಂತಂತೆ ಕಂಡರೂ**
**ವಾಸ್ತವವಾಗಿ –**
**ಆ ಅಜಂತದ ಬುದ್ಧ ಮೂರ್ತಿಯ ಹಾಗೆ ನೀನು ಎತ್ತರ,**
**ಬಹಳ ಎತ್ತರ ;**
**ನಾನಾದರೀ ನಾಚ ನೆಲಕ್ಕೆ ತಗ್ಗಿ ನಿಲ್ಲುವ ಉದ್ಬಾಹು ವಾಮನ !**

ವೈಭವದಿಂದ ಮೆರೆಯುವ ಪ್ರಕೃತಿಯನ್ನು ಒಮ್ಮೆ ಮಹಾಕಾವ್ಯಕ್ಕೆ, ಮತ್ತೊಮ್ಮೆ ಭಾವಗೀತೆಗೆ ಹೋಲಿಸಿದ್ದಾರೆ.

ಪ್ರಕೃತಿಗೆ ಹಲವು ಮುಖ. ವಸಂತ, ಬೇಸಿಗೆ, ಮಳೆ, ಚಳಿ ಈ ಎಲ್ಲ ಋತುಗಳ ರೂಪ ವಿಲಾಸಕ್ಕೆ ಬೆರಗಾಗುತ್ತಾ ಮನುಷ್ಯ ಸೋತಿದ್ದಾನೆ ಇಷ್ಟು ಮಾತ್ರವಲ್ಲ –

**ನೀನು ಇಷ್ಟೇ ಎಂದು ಹೇಳಬಲ್ಲವರಾರು?**
**ಹಲವು ಪಾತ್ರಗಳಲ್ಲಿ ಹರಿಯುತಿರುವೆ ;**
**ಮೂಕಪ್ರೇಕ್ಷಕನಾಗಿ ನಾನೆ ನೋಡುವೆನಲ್ಲ –**
**ನಲಿನಲಿದರೂ ಮತ್ತೆ ನೋಯುತಿರುವೆ !**

ಹೀಗೆ ಪ್ರಕೃತಿಯ ಶಕ್ತಿ ಅಪಾರ. ಆದರೆ "ಸ್ವಿಚ್ಚೊತ್ತಿದಾಗ ಝುಗ್ಗನೆ ಹೊತ್ತಿ ಉರಿದುರಿದು ಆರಿಹೋಗುವ ಬಲ್ಬು ನನ್ನ ಸಾಹಸವೆಲ್ಲ!" ಎಂದು ಹೇಳುವ ಮೂಲಕ ಮನುಷ್ಯನ ಕೊರತೆ ಮತ್ತು ಕ್ಷಣಿಕತೆಯ ಬಗ್ಗೆ ತಿಳಿಸಿಕೊಟ್ಟಿದ್ದಾರೆ.

ಯಾರ ಸೂತ್ರಕ್ಕೋ ಕೈ ಗೊಂಬೆಗಳಾಗಿ ಆಡುತ್ತಿದ್ದೇವೆ ಎಂದು ಹೇಳುತ್ತಾ ವಿಧಿ ಆಟ ಅಥವಾ ದೈವ ಲೀಲೆಯ ಪರಿ ಇದು ಎಂದು ಭಾವಿಸಿ ಪ್ರಕೃತಿಯ ರೂಪ, ವಿಲಾಸ, ಬೆಡಗು, ವೈಭವ ಎಲ್ಲದರ ಮಹತ್ವವನ್ನು ಕವಿತೆಯ ಮೂಲಕ ಕಟ್ಟಿದ್ದಾರೆ.

ಹೀಗೆ ಒಟ್ಟಾರೆಯಾಗಿ ಸಿ.ಪಿ.ಕೆ. ಅವರ ಕಾವ್ಯಗಳಲ್ಲಿ ಪ್ರಕೃತಿ ಅಗ್ರಸ್ಥಾನ ಪಡೆದಿದ್ದು ಅದರ ಜೊತೆ ಜೀವನ, ಆಧ್ಯಾತ್ಮ, ಅವುಗಳ ಸಂಬಂಧಗಳನ್ನು ತಿಳಿಸಿದ್ದಾರೆ. ಪ್ರಕೃತಿಯನ್ನು ವಿಭಿನ್ನ ಮತ್ತು ವಿಶಿಷ್ಟ ದೃಷ್ಟಿಯಲ್ಲಿ ಕಂಡಿದ್ದಾರೆ. ಪ್ರಕೃತಿಯ ಸೊಬಗು, ಸೌಂದರ್ಯ, ರೌದ್ರತೆ ಎಲ್ಲವನ್ನು ಕಟ್ಟಿಕೊಡುವುದರ ಜೊತೆಗೆ ಪರಿಸರ ನಾಶ, ಅದರ ಭೀಕರ ಪರಿಣಾಮ ಇವುಗಳನ್ನು ನೇರ ಮತ್ತು ನಿಷ್ಠುರವಾಗಿ ಹೇಳುವ ಮೂಲಕ ಪರಿಸರ ಪರ ಕಾಳಜಿಯನ್ನು ವ್ಯಕ್ತಪಡಿಸಿರುವುದನ್ನು ಅವರ ಕವನಗಳಲ್ಲಿ ಕಾಣಬಹುದಾಗಿದೆ.

### ೪.೨ ಜೀವನ, ತಾತ್ವಿಕತೆ ಮತ್ತು ಅಧ್ಯಾತ್ಮ ಗೀತೆಗಳು

ಸಿ.ಪಿ.ಕೆ. ಅವರು ತಮ್ಮ ಕಾವ್ಯಗಳಲ್ಲಿ ಮನುಷ್ಯನ ಬದುಕಿನೊಂದಿಗೆ ತಾತ್ವಿಕತೆ ಮತ್ತು ಅಧ್ಯಾತ್ಮಕತೆಯನ್ನು ಸಮನ್ವಯಗೊಳಿಸಿದ್ದಾರೆ. ಮನುಷ್ಯನ ಬದುಕು ಹುಟ್ಟಿನಿಂದ ಆರಂಭಗೊಂಡು ಹಂತ ಹಂತವಾಗಿ ಹಣ್ಣಾಗಿ ದೂಳಿನಲ್ಲಿ ಕೊನೆಯಾಗುವವರೆಗೂ ಹಲವು ವಿದಧ ಹಸಿವನ್ನು ಇಂಗಿಸಿಕೊಂಡು (ಅನ್ನ, ಜ್ಞಾನ, ಇಂದ್ರೀಯ, ಆತ್ಮದ ಹಸಿವು) ಬದುಕಿನಲ್ಲಿ ಯಾರನ್ನು ಆಶ್ರಯಿಸದೆ ತನ್ನ ಬದುಕಿನ ಪರೀಕ್ಷೆಯನ್ನು ತಾನೇ ಎದುರಿಸಿ ಯಾವ ವಿಷ ಜಂತುಗಳಿಗೂ ಸಿಲುಕದೆ, ಹೆದರದೆ, ತನ್ನಿಚ್ಛೆಯಂತೆ ದುಂಬಿಯ ಹಾಗೆ ಸ್ವತಂತ್ರವಾಗಿ ಜೇನ ಹೀರಿ ಸಮಾಜಕ್ಕೆ ಸಿಹಿ ಕೊಡುವ ಆದರ್ಶ ಬದುಕ ಕಟ್ಟಿಕೋ ಎಂಬ ಸಂದೇಶ ನೀಡಿದ್ದಾರೆ. ಬದುಕನ್ನು ಮನಬಂದಂತೆ ಹರಿಯ ಬಿಟ್ಟರೆ ಮೂರಾಬಟ್ಟೆಯಾಗುತ್ತದೆ ಎಂಬುದನ್ನು ಹೇಳುತ್ತಾ ತಾವು ಕಂಡವಾಸ್ತವ ಬದುಕಿನ ಚಿತ್ರಣವನ್ನು ಕಟ್ಟಿಕೊಟ್ಟಿದ್ದಾರೆ. ಅವರ ಕಾವ್ಯಗಳಲ್ಲಿ ಜೀವನದ ಟೀಕೆ, ವಿಡಂಭನೆ, ಖಂಡನೆಯನ್ನು ಸಹ ಕಾಣಬಹುದಾಗಿದೆ.

ಸಿ.ಪಿ.ಕೆ ಅವರ ಕಾವ್ಯಗಳಲ್ಲಿ ಬದುಕಿನೊಂದಿಗೆ ತಾತ್ವಿಕತೆ, ಆಧ್ಯಾತ್ಮಿಕತೆ ತಳುಕು ಹಾಕಿಕೊಂಡಿರುವುದನ್ನು ಧ್ವನಿಸುವುದರ ಜೊತೆಗೆ ಲೌಕಿಕಕ್ಕಿಂತ ಅಧ್ಯಾತ್ಮಿಕತೆ ದೊಡ್ಡದು. ಎಲ್ಲಾರನ್ನು ರಕ್ಷಿಸುವ ದೇವರು, ಅವನೆ ಶಿವ ಎಂಬ ತತ್ವವನ್ನು ಸಾರುತ್ತಾ ಬದುಕು ನಾವೆಂದುಕೊಂಡಂತೆ ಸುಲಭಗ್ರಹ್ಯವಲ್ಲ ಎಂಬ ತಾತ್ವಿಕ ವಿಚಾರಗಳನ್ನು ಕಟ್ಟಿಕೊಟ್ಟಿದ್ದಾರೆ.

**'ತಾರಾಸಖ'** ಕವನ ಸಂಕಲನದ **'ಭ್ರಮರ ಗೀತೆ'** ಕವನವು ಬಾಳೊಂದು ಹೂದೋಟ ಅದರಲ್ಲಿ ನಾವೆಲ್ಲರೂ ಬಂಡುಣಿಗಳಂತೆ ಅದು ಸಂತೋಷ ಉಲ್ಲಾಸದಿ ಸ್ವಚ್ಛಂದವಾಗಿ ಹೂವಿನಿಂದ ಹೂವಿಗೆ ಹಾರುವ ದುಂಬಿಯಂತೆ ನಮ್ಮ ಮನಸ್ಸು ಹಾರುತ್ತಿರಲಿ ಎಂದು ಮನಸ್ಸನ್ನು ಭ್ರಮರಕ್ಕೆ ಹೋಲಿಸಲಾಗಿದೆ. ಅದು ಹೂವು ಯಾವುದಾದರೇನು ಬಂಡುಂಡು ಜೇನಾಗಿಸುತ್ತದೆ. ಅದರಂತೆ ನಿನ್ನ ಮನವಿರಲಿ ಚಿಂತೆ ಬೇಡ, ಶಾಂತಿಯಿರಲಿ, ತೃಪ್ತಿಯ ಝೇಂಕಾರ, ಭಾವಶುದ್ಧಿ ನಿನ್ನೊಳಿರಲಿ ಮನವೇ ಎಂದಿದ್ದಾರೆ.

ಅಲ್ಲಿ ಉಂಟು ಕಾಳಸರ್ಪ, ಕ್ರೂರಮೃಗಗಳು, ವಿಷದ ಕ್ರಿಮಿಗಳು ಎಂದು ಸಮಾಜದಲ್ಲಿಯ ದುಷ್ಟ ಮನಸ್ಸುಗಳಿಗೆ ಸಾಂಕೇತಿಕರಿಸುತ್ತಾ ನೋವು-ನಲಿವು, ಕಷ್ಟ-ಸುಖ, ಸೋಲು-ಗೆಲುವು ಎಲ್ಲ ಬದುಕಿನ ಆಟ. ಅದರ ಗೊಡವೆ ನಮಗೇಕೆ. ನಮ್ಮ ಹಾಡು ನಮಗೆ, ನಮ್ಮ ಪಾಡು ನಮಗೆ ಎಂದು ಮುನ್ನಡೆಯಬೇಕು.

ಸಮಾಜದಲ್ಲಿ ಹಲವು ತರದ ವ್ಯಕ್ತಿತ್ವಗಳಿರುತ್ತವೆ. ಜಾತಿ ನಿಲುವುಗಳಿರುತ್ತವೆ. ಹೂವುಗಳನ್ನು ಸಮಾಜದಲ್ಲಿಯ ಜಾತಿಯ ನೆಲೆ, ಮನಸ್ಥಿತಿ, ವ್ಯಕ್ತಿತ್ವಗಳಿಗೆ ಹೋಲಿಕೆ ನೀಡುತ್ತಾ, ಅವುಗಳಿಗೆಲ್ಲ ಕಾರಣಕರ್ತನೊಬ್ಬನೆ ಅವನ ಇಚ್ಛೆಯಂತೆ, ದುಂಬಿ ಯಾವ ಹೂವಾದರೇನು ರಸವ ಹೀರಿ ಜೇನಾಗಿಸುವಂತೆ ಸಮಾಜದಲ್ಲಿ ಯಾವುದೇ ಪಕ್ಷಪಾತ ಮಾಡದೆ ಮುಕ್ತ ಮನಸ್ಸಿನ ಶುದ್ಧ ಸಮಾಜ ಕಟ್ಟುವಲ್ಲಿ ನೆರವಾಗು ಎಂಬ ಆಶಯ ವ್ಯಕ್ತವಾಗಿದೆ.

ಶಿವನು ಲೋಕೋದ್ಧಾರಕ್ಕಾಗಿ ಕುಡಿಯಲಿಲ್ಲವೇ ವಿಷವ. ಅದು ಹಾನಿಯಲ್ಲ. ಜಗಕ್ಕೆ ಶುಭ ಅದನ್ನು ನೆನಪಿಟ್ಟುಕೊಂಡು ನಾವು ಮಾಡುವ ಕೆಲಸ ಯಾವುದೇ ಆದರೂ ಅದರಿಂದ ದೊರೆಯುವ ಪ್ರತಿಫಲ ಮುಖ್ಯ.

ನಮಗಿರುವ ಆಯುಷ್ಯ ಎಷ್ಟು ಎಂಬುದು ಅಮುಖ್ಯವಾಗಿ ನಾನು ಜಗಕ್ಕೆ ಕೊಟ್ಟಿದ್ದೇನು? ಎಷ್ಟು? ಎಂಬುದು ಮುಖ್ಯವಾಗಿ ಇಲ್ಲಿ ಬಂದು ಹೋಗುವುದಷ್ಟೆ ನಮ್ಮ ಕೆಲಸ, ಒಡೆತನ ನಮ್ಮದಲ್ಲ. ಅವನು ಕಾವಲಿಹನು ಎಲ್ಲೋ ಅವನ ಅನುಜ್ಞರು ನಾವೆಲ್ಲ ಎಂಬ ಜೀವನ ತಾತ್ವಿಕತೆಯನ್ನು ಹೇಳುವ ಪ್ರಯತ್ನ ಮಾಡಲಾಗಿದೆ.

**'ಸಂದಿಗ್ಧ'** ಕವನದಲ್ಲಿ ಜೀವನವೇ ಒಂದು ಸಂದಿಗ್ಧ, ಅಲ್ಲಿ ಬಂದು ಹೋಗುವ ವಿಷಯಗಳೆಷ್ಟೋ ಎನ್ನುತ್ತಾ ದ್ವಂದ್ವವನ್ನು ವ್ಯಕ್ತಪಡಿಸಿದ್ದಾರೆ.

**ಯಾವ ಹಸಿವನು ತಣಿಸಲಿ ?**
**ಎಲ್ಲಕಿಂ ಹಿರಿದೆಂದು**
**ಯಾವುದನು ಪರಿಗಣಿಸಲಿ ? –**

ಎಂಬ ಇಕ್ಕಟ್ಟಿನ ಪರಿಸ್ಥಿತಿಗೆ ಸಿಲುಕಿ ಯಾವುದು ಮುಖ್ಯ, ಯಾವುದು ಅಮುಖ್ಯ ಎಂದು ಹೇಳಲಾಗದೆ ವಿವಿಧ ಹಸಿವುಗಳನ್ನು ಸಾಂಕೇತಿಸಿದ್ದಾರೆ. ಅವುಗಳಲ್ಲಿ ಹೊಟ್ಟೆಯ ಹಸಿವು, ಇಂದ್ರಿಯ ಸುಖದ ಹಸಿವು, ಜ್ಞಾನದ ಹಸಿವು, ಆತ್ಮದ ಹಸಿವು – ಇವು ತಮ್ಮ ತಮ್ಮ ಹಸಿವುಗಳೇ ಹೆಚ್ಚು, ಅದೇ ಮುಖ್ಯ ಎಂದು ಭಾವಿಸುವುದನ್ನು ಪರಿಣಾಮಕಾರಿಯಾಗಿ ಕಟ್ಟಿಕೊಟ್ಟಿದ್ದಾರೆ.

ದಿನ ಪ್ರಾರಂಭಗೊಂಡಂದಿನಿಂದ ಕತ್ತಲವರೆಗೂ ರುಚಿಕರ ಪುಷ್ಕಳ ಭೋಜನವುಂಡು ಕೈಲಾಸವ ಕಂಡು ಬದುಕಿನಲ್ಲಿ ಇದಕ್ಕಿಂತ ಇನ್ನೇನು ಬೇಕೆನ್ನುವ 'ಹೊಟ್ಟೆಯ ಹಸಿವು', ನನಗಿಂತಲು ಶ್ರೇಷ್ಠರು ಯಾರು, ಎಲ್ಲವನ್ನು ಮೀರಿದ ದೇವರು ನಾನೇ, ನನ್ನ ಸಂತಸಗೊಳಿಸಿದರೆ ಅದರಿಂದಲೇ ಸುಮಧುರ ಜೀವನ ಎನ್ನುವ ಇಂದ್ರಿಯ ಸುಖ, ಮೂರು ಲೋಕದ ಜ್ಞಾನ ಸಾಗರವೇ ನನಗಾಗಲಿ ಪ್ರಿಯವಾದಾಹಾರ. ಸರ್ವವಿಚಾರ, ಶಾಸ್ತ್ರಗಳೆಲ್ಲವ ತನ್ನಲ್ಲಿ ಅಡಗಿಸಿಕೊಂಡರೆ ಮೆದುಳಿನ ಹಸಿವು ಹಿಂಗುವುದು ಎಂಬ 'ಜ್ಞಾನದ ಹಸಿವು'ಗಳ ಬಗ್ಗೆ ತಿಳಿಸಿದ್ದಾರೆ. ನಂತರದಲ್ಲಿ ಮೇಲಿನವುಗಳಾವುವು ಹಸಿವುಗಳೆ ಅಲ್ಲ, ಅವುಗಳೆಲ್ಲವು

**'ನನ್ನೀ ಜ್ವಾಲೆಗೆ ಇವು ಬರಿ ಕಟ್ಟಿಗೆ,**
**ಇವಕಿಂ ಶ್ರೇಷ್ಠನು ನಾನದ ನೆನಪಿಡು'** – ಎನ್ನುತ್ತಲೇ,

ಗಮನಿಸು ನನ್ನ ಕರೆಯನು, ದನಿಗೂಡು ಎಂದು ಎಲ್ಲರಿಗಿಂತ ನಾನೇ ಶ್ರೇಷ್ಠ, ಮಿಗಿಲು ಎನ್ನುವ ಆತ್ಮದ ಹಸಿವು ಎಂಬ ನಿಲುವನ್ನು ವ್ಯಕ್ತಪಡಿಸಿದ್ದಾರೆ.

ಇವುಗಳಲ್ಲಿ ಯಾವುದರ ಮೂಲಕ ಭೂಮಿಯಲ್ಲಿ ಹುಟ್ಟಿದ್ದಕ್ಕೆ ಸಾರ್ಥಕತೆ, ಮೋಕ್ಷ ಗಳಿಸುವುದು ಎಂದು ಅರಿಯದೆ, ಯಾರದೋ ದಯೆಗಾಗಿ ಅಪೇಕ್ಷಿಸುವ ದುರ್ಬಲ ಮನಸ್ಸಿನ ದುಃಖಿಯು ನಾನು ಎನ್ನುತ್ತಾ ಮನುಷ್ಯನು ತನ್ನೊಳಗಿನ ಹಸಿವುಗಳನ್ನು ವ್ಯವಸ್ಥಿತವಾಗಿ ಹಿಂಗಿಸಿಕೊಳ್ಳಲಾಗದ ಗೊಂದಲದ ಸ್ಥಿತಿಯನ್ನು ಮನೋಜ್ಞವಾಗಿ ಕಟ್ಟಿಕೊಟ್ಟಿದ್ದಾರೆ.

**'ವಾಸ್ತವ'** ಕವನದಲ್ಲಿ ಮನುಷ್ಯ ತನ್ನ ಬದುಕನ್ನು ವಾಸ್ತವತೆಯ ನೆಲೆಯಲ್ಲಿ ನೋಡುವ ಬದಲು ಅದನ್ನು ತನ್ನಿಚ್ಛೆಗೆ ಅನುಗುಣವಾಗಿ ನೋಡುವ ವಿರೋಧಾಭಾಸದ ದೃಷ್ಟಿಕೋನವನ್ನು ಹೊಂದಿರುವುದನ್ನು ವ್ಯಕ್ತಪಡಿಸಿದ್ದಾರೆ.

**ತನ್ನಿಚ್ಛೆಯ ಹಾದಿಯಲ್ಲ, ಬಯಲಾಟದ ಗೊಂಬೆ;**
**ಗಿಡದಲಿ ಗೋಸುಂಬೆ.**

ಬದುಕಿನ ಹಾದಿ ನಮ್ಮದಲ್ಲ. ಯಾರದೋ ಸೂತ್ರದಿ ಆಡುವ ಬೊಂಬೆಗಳಾಗಿ ಜೀವನದುದ್ದಕ್ಕೂ ನಾನಾ ವೇಷಗಳನ್ನು ತೊಟ್ಟು ಸಮಯಕ್ಕನುಗುಣವಾಗಿ ನಡೆದುಕೊಳ್ಳುವ ನಮ್ಮ ಬದುಕು ಪ್ರವಾಹ ಬಂದು ಭೋರ್ಗರೆಯುವ ನದಿಯಲ್ಲಿ ಹುಟ್ಟು ಇರದ ದೋಣಿಯಂತೆ.

ಅಬ್ಬರಿಸುತ ಬೀಸಿ ಬರುವ ಬಿರುಗಾಳಿಗೆ ತೂರಿ ಬಿಟ್ಟ ತರಗೆಲೆಯಂತೆ. ಆದರೂ ಪ್ರಕೃತಿಯನ್ನು ತನ್ನಿಷ್ಟಕ್ಕೆ ತಕ್ಕಹಾಗೆ ಮಣಿಸಬಲ್ಲೆ ಎಂಬ ಅಹಂಭಾವದಿಂದಿರುವ ಇವನು ಮಕರಂದ ಸವಿಯುವ ಬಂಡುಣಿಯಾಗಲಿಲ್ಲ, ಮಧುರ ನಾದ ಹೊಮ್ಮಿಸುವ ಪಿಕವಾಗಲಿಲ್ಲ, ಕಾಗೆ ಕಪ್ಪೆಗಿಂತ ಕಡೆ ಎಂದಿರುವುದು ಅವನ ಸ್ವಭಾವಕ್ಕೆ ಸೂಕ್ತವಾಗಿದೆ.

**ಆಗಲಿಲ್ಲ ಪ್ರವಾಹದಲಿ ಬಂಡೆ; ಬರಿಯ ಬೆಂಡು,**
**–ಹುಡುಗರ ಕಾಲ್ಚೆಂಡು.**

ಹೀಗೆ ಒದ್ದ ಕಡೆ ತೂರಿ ಬಿಡುವ ಬದುಕಿನಲ್ಲಿ ಅಮೃತ ಕುಡಿದು ಅಮರನಾಗುವ ಆಸೆ. ಆದರೆ ಆದದ್ದು ಹುಳಿಹೆಂಡದ ದಾಸ. ಜೀವಿಗಳಲ್ಲೆ ವಿಶಿಷ್ಟ ಸ್ಥಾನ ಪಡೆದಿದ್ದ ಮನುಷ್ಯ ಭೋಗ ಲಾಲಸೆಗೆ ಒಳಗಾಗಿ ಶ್ರೇಷ್ಠನಾಗದೆ ಹೋದ ಎಂಬುದನ್ನು 'ಜೀವವಿದ್ದರೇನು ಸಾವು' ಎಂಬ ಮಾತಿನ ಮೂಲಕ ಬದುಕಿದ್ದು ಸತ್ತವರಂತೆ ಬದುಕುವ ಜನರ ಬಗ್ಗೆ ಮನೋಜ್ಞವಾಗಿ ಕಟ್ಟಿಕೊಟ್ಟಿದ್ದಾರೆ.

**'ತಾರಾಸಖ'** ಕವನ ಸಂಕಲನದ **'ನಿರಾಸೆ'** ಕವನವು ಜೀವನದ ಸಂದಿಗ್ಧತೆಯನ್ನು ತೆರೆದಿಡುತ್ತದೆ. ಎದೆಯ ಮಸಣದಲಿ ಹಲವು ಚಿಂತೆಗಳು 'ಚಿತೆ'ಯಾಗಿ ಉರಿಯುತ್ತಿವೆ.

ಸಿಡಿಲಿನ ಆರ್ಭಟಕ್ಕೆ ಸಿಕ್ಕಿ ಇಳೆಗೊರಗುವ ಸೌಧಗಳಂತೆ, ಬಿರುಗಾಳಿಗೆ ಸಿಕ್ಕ ಗಾಳಿಪಟದಂತೆ, ಆನಂದದಿ ವಿಹರಿಸುವ ಪಕ್ಷಿ ಬಾಣದ ಒಡೆತಕ್ಕೆ ಸಿಕ್ಕು ಧರೆಗೊರಗುವಂತೆ ಕಟ್ಟಿದ ಕನಸುಗಳು ಕುಸಿದು ಬೀಳುತ್ತಿವೆ. ಮನೋಹರ ಕಾಮನ ಬಿಲ್ಲಿನಿಂದೆ ನುಸುಳುವ ಸಿಡಿಲಿನಂತೆ, ಕಂಡು ಮಾಯವಾಗುವ ಮರೀಚಿಕೆಯಂತೆ, ಹೂವೆ ಹಾವಾಗುವ ಸಂದರ್ಭಗಳು ವಾಸ್ತವಕ್ಕೆ ಪೂರಕವಾಗಿ ಬಂದಿವೆ.

**ಮಸಣದಲಿ ನಂದನವ ಕಟ್ಟುವಾಸೆಯ ತಳೆದು**
**ಯತ್ನ–ವಿಫಲದಿ ಜೀವ ತೊಳಲುತ್ತಿದೆ.**
**ಸೋಲಬಾರದು ಎಂದು ಹಟವ ಹಿಡಿದಿದೆ ಜೀವ,**
**ನೆಳಲು ಬೆಳಕಿನ ಆಟ ನಡೆಯುತ್ತಿದೆ !**

ಮನುಷ್ಯನ ನಿರೀಕ್ಷೆಯನ್ನು ಮೀರಿ ಜೀವನದ ಹೋರಾಟ ನಡೆಯುತ್ತಿದೆ. ಸೋಲು–ಗೆಲುವಿನ ಆಟದಲ್ಲಿ ಗೆಲುವಿನ ಬೆನ್ನು ಹಿಡಿದ ಜೀವ, ವಿಫಲತೆಗಳನ್ನು ಹೊಂದುತ್ತಾ ಜೀವನದ ಆಟ ನಡೆಸುತ್ತಾ ನಿರಾಸೆಯನ್ನೇ ಅನುಭವಿಸುತ್ತಿರುವ ದುರ್ದೆಸೆಯನ್ನು ಕವನ ಕಟ್ಟಿಕೊಟ್ಟಿದೆ. ಗೆಲ್ಲುವ ಅಹಂಕಾರದಲ್ಲಿರುವ ಮನುಷ್ಯನಿಗೆ ನಿರಾಶೆಯ ಪೆಟ್ಟು ತಾಗಿದ ಬಗೆಯನ್ನು ಕಾಣಬಹುದು.

**'ಸಮೀಕ್ಷೆ'** ಕವನವು ಮನುಷ್ಯ ಜನ್ಮತಳೆದಂದಿನಿಂದ ಇಲ್ಲಿಯವರೆಗೆ ಎಷ್ಟೇ ಯುಗ ಯುಗಗಳು ಕಳೆದರು, ಕಾಲ ಹೊಸತನವನ್ನು ಹೊತ್ತು ತಂದರೂ ಮನುಷ್ಯ ಮಾತ್ರ ತನ್ನ ಸ್ವಾರ್ಥ, ದ್ರೋಹ, ವಂಚನೆಯ ಕೂಪದಿಂದ ಹೊರಬರದ ಪರಿಯನ್ನು ತೆರೆದಿಡುತ್ತದೆ.

ಪ್ರತಿ ವರ್ಷ ಹೊಸತನ ಹೊತ್ತು ಬರುತ್ತಿದೆ ಸಂಕ್ರಾಂತಿ ಸೂರ್ಯ ಪಥದ ಬದಲಾವಣೆಯೊಂದಿಗೆ, ಅದು ಕೇವಲ ಪಂಚಾಂಗದಲ್ಲಿ. ಅದು ವಾಸ್ತವತೆಯಲ್ಲ ಕ್ರಾಂತಿ, ಶಾಂತಿಯ

ಮಂತ್ರ ಅದು ಬೂಟಾಟಿಕೆಯಷ್ಟೆ. ಮನುಷ್ಯ ವಿಜ್ಞಾನ ತಂತ್ರಜ್ಞಾನಗಳ ಆವಿಷ್ಕಾರದ ಮೂಲಕ ಚಂದ್ರ, ಮಂಗಳ ಇನ್ನಿತರ ಗ್ರಹಗಳಿಗೆ ಹೋಗಿ ಬಂದರೂ ಸೈತಾನ ಗುಣ ಬೆಳೆಯುತ್ತಿದೆ. ಆದರೆ ಬೆಳೆಯಬೇಕಾದುದು ಬುದ್ಧನ ಶಾಂತಿ, ಅದು ನೆಲೆಗೊಳ್ಳಬೇಕಾದುದು ಜಗದ ಮನಗಳಲ್ಲಿ, ಅದುವೇ ಶಾಶ್ವತ, ಉಳಿದವೆಲ್ಲ ತಾತ್ಕಾಲಿಕ.

**ಇಂದು ಏನಾಗಿಹುದು ಈ ನಾಡು, ನೋಡು :**
**ಪಾರತಂತ್ರ್ಯದ ಚಳಿಯ ತಮವ ದಾಟಿದೆವಂದು**
**ಆ ಮಹಾತ್ಮನ ಕಣ್ಣ ಬೆಳಕಿನಲ್ಲಿ.**
**ಈಗ ಅದು ಹಳೆಯ ಕತೆ, ನೆನಪು, ಬರಿಯ ಪವಾದ**
**ಬಹಳ ಗೂಢ !**

ಕೊಂದಿದ್ದು ಅಂದಲ್ಲ ಮಹಾತ್ಮನನ್ನು, ಕೊಲ್ಲುತಿರುವೆವು ದಿನನಿತ್ಯವು ಇಂದು. ಕಾಯುವವರೆ ಕೊಲ್ಲುವಂತಾದರೆ ಸತ್ಯ ನಿಷ್ಠೆಗಾದರು ಬೆಲೆಯುಂಟೆ ಎಂಬ ಧೋರಣೆಯೊಂದಿಗೆ ಕವಿ–

**ಹಾಲು ಹರಿದಿದೆ ಇಲ್ಲಿ, ಜೇನು ಸುರಿದಿದೆ ಇಲ್ಲಿ, ಹೂವು ಚೆಲ್ಲಿದೆ ಇಲ್ಲಿ**
**ಎಂದೆಲ್ಲ ನಾನಿನ್ನು ಹಾಡಲಾರೆ;**

ಎಂಬ ಭಾರವಾದ ಮನಸ್ಸಿನ ಮೂಲಕ ಲೋಕದಲ್ಲಿ ಹಾಲಾಹಲ ತುಂಬಿಕೊಂಡು ನಂಬಿಕೆಗೆ, ವಿಶ್ವಾಸಕ್ಕರ್ಹವಲ್ಲದ ಮನಸ್ಸುಗಳ ಬಗ್ಗೆ ವಿರೋಧ ಭಾವನೆ ತಳೆದಿದ್ದಾರೆ.

**ಮನದ ಹಾಲಹಲವನೀಂಟುತ ಉದ್ಧರಿಸು ಶಿವಶಕ್ತಿಯೇ**
**ಮಣ್ಣಿನಿಂ ಮೇಲೆತ್ತಿ ಧ್ರುವತಾರೆಯನು ತೋರಿಸು ಮುಕ್ತಿಯೇ**
**ಹೊಸತು ಜಗವನು, ಹೊಸತು ಯುಗವನು ತೆರೆದು ಬಾ ಸಂಕ್ರಾಂತಿಯೇ**
**ನಮ್ಮ ಹೃದಯದ ಕಾಳಿಕೆಗೆ ದಿವ್ಯಾಗ್ನಿಯನ್ನಿಡು ಕ್ರಾಂತಿಯೇ ನೆಲಸು ಬಾ ಸುಖ ಶಾಂತಿಯೆ !**

ಎಂಬ ಸಾಲುಗಳ ಮೂಲಕ ಮನುಷ್ಯನ ವಿರೋಧಾಭಾಸದ ವಿಕೃತ ಭಾವನೆಗಳ ಮನಃಸ್ಥಿತಿಯನ್ನು ಹೋಗಲಾಡಿಸಿ ಹೊಸ ವರುಷದೊಂದಿಗೆ ಸುಖ ಶಾಂತಿ ನೆಮ್ಮದಿ ನೆಲೆಸುವಂತೆ ಮಾಡು ಎಂದು ಶಿವನಲ್ಲಿ ದೈನ್ಯತೆಯಿಂದ ಬೇಡಿದ್ದಾರೆ.

**'ತಾರಾಸಖ'** ಕವನ ಸಂಕಲನದ **'ನಿನ್ನ ಮಹಿಮೆ'** ಕವನದಲ್ಲಿ ಮಾನವ ಧರ್ಮ ಮತ್ತು ವೈಜ್ಞಾನಿಕತೆಗಳ ಮೂಲಕ ಏನೆಲ್ಲ ಸಾಧನೆಯನ್ನು ಮಾಡಿದರೂ ಅದು ಪ್ರಕೃತಿ ಸೃಷ್ಟಿಸುವ ವೈಶಿಷ್ಟ್ಯತೆಗಳ ಮುಂದೆ ಎಲ್ಲಾ ಶೂನ್ಯ ಎಂಬ ಧೋರಣೆಯೊಂದಿಗೆ ಅಗೋಚರ ಶಕ್ತಿಯ ಮಾಯಾ ವೈಶಿಷ್ಟ್ಯತೆಗಳನ್ನು ಕಟ್ಟಿಕೊಟ್ಟಿದ್ದಾರೆ.

ಭೂಮಿ ಆಕಾಶಗಳಲ್ಲಿ ನಡೆಯುವ ಎಲ್ಲಾ ಘಟನೆಗಳಿಗೂ, ಮೂರು ಜಗದ ಎಲ್ಲಾ ಚೈತನ್ಯಕ್ಕೂ ಮೂಲ ಸೃಷ್ಟಿಕರ್ತ. 'ನಿನ್ನತುಲ ಶಕ್ತಿಗಿಹ ಸಂಕೇತವೆಂಬಂತೆ' ಭೂಮಿ, ಆಕಾಶ, ರವಿ, ಚಂದ್ರ ತಾರೆ ನೀಹಾರಿಕೆ, ಗಾಳಿ, ಬೆಳಕು, ಋತುಮಾನ, ಮರ, ಗಿಡ, ಪಕ್ಷಿ–ಪ್ರಾಣಿ, ಮನುಷ್ಯ, ಇವೆಲ್ಲವೂ ನಿನ್ನಾಣತಿಯಂತೆ ಬದುಕಿನ ವ್ಯಾಪಾರವನ್ನು ಮಲಗಿಸುತ್ತಿಹಲಿರುವ ಇವುಗಳನ್ನು ಸೃಷ್ಟಿಸಿದ ನಿನ್ನ ವಿಶಿಷ್ಟ ವೈಚಿತ್ರ್ಯಗಳನ್ನು ಏನೆಂದು ಬಣ್ಣಿಸಲು ಸಾಧ್ಯ ಎಂದು ಹೇಳುತ್ತಾ–

**ಪುಟ್ಟ ಮಾನವಮೂರ್ತಿಗುಸಿರ ನೀನೊಲಿದಿತ್ತು**
**ತಾಯ ಗರ್ಭದೊಳದನದೆಂತಿರಿಸಿದೆ ?**
**ಎಣಿಕೆಗೆ ಅತೀತವೆನಿಸುವ ಬಲು ವಿಚಿತ್ರತರ**
**ಪ್ರಾಣಿಗಳನೆಂತೊಲಿದು ನೀ ಸೃಜಿಸಿದೆ ?**

ಗಿಡ ಮರಗಳ ಹಸಿರೊಳಗೆ ಧವಳವರ್ಣದ ಕುಸುಮಗಳ ಸೃಷ್ಟಿಸಿ ಹೊಸ ಚೈತನ್ಯಕ್ಕೆ ಪ್ರೇರಕ ಶಕ್ತಿಯಾದ ಕಾಲವೇ ನಿನ್ನ ಮಹಿಮೆಯನ್ನು ವರ್ಣಿಸಲು ಅಸಾಧ್ಯವಾಗಿದ್ದು, ನಿನ್ನ ಚೈತನ್ಯ ಶಕ್ತಿಯ ದರ್ಶನಾನಂದದಿಂದ ನಲಿಯುವುದು ಮನಸ್ಸು. ನಿನ್ನ ಶಕ್ತಿಯ ಮಿಂಚು ಸಂಚರಿಸುವುದು ಎಲ್ಲೆಲ್ಲೂ, ಹಾಗಾಗಿ ಜಗತ್ತೆಂಬ ತೇರಿನ ಸಾರಥಿಯೇ ನಿನಗೆ ವಂದನೆಗಳು ಎಂದಿದ್ದಾರೆ.

ಮನುಷ್ಯ ವಿಜ್ಞಾನ ತಂತ್ರಜ್ಞಾನಗಳ ಮೂಲಕ ಏನೆಲ್ಲ ಹೊಸ ಹೊಸ ಆವಿಷ್ಕಾರಗಳನ್ನು ಮಾಡಿದರು, ಅವು ಪ್ರಕೃತಿಯೊಳಗೆ ನಡೆಯುವ ವಿಶಿಷ್ಟ ವಿಸ್ಮಯಗಳ ಮುಂದೆ ಏನೂ ಅಲ್ಲ. ಮನುಷ್ಯ ಪ್ರಯತ್ನ ಫಲದ ಆವಿಷ್ಕಾರಗಳೆಲ್ಲವೂ ಕಾಲದ ಒಡಲಿನಾಹಾರವಾಗಲೇಬೇಕೆಂದು ಮನುಷ್ಯ ಮತ್ತು ಪ್ರಕೃತಿಯ ನಡುವಿನ ತಾಕಲಾಟವನ್ನು ಪ್ರಕೃತಿಯ ಮುಂದೆ ಮನುಷ್ಯನ ಸೋಲನ್ನು ಕವಿ ಅದ್ಭುತವಾಗಿ ವರ್ಣಿಸಿದ್ದಾರೆ.

**'ತಾರಾಸಖ'** ಕವನ ಸಂಕಲನದ **'ಪಾಡು'** ಕವನದಲ್ಲಿ ಮನುಷ್ಯನು ಕಾಲ ನಿರ್ಣಯಕ್ಕೆ ಬಂಧಿಯಾಗಿ ಅದರ ಅಂಕೆಯಲ್ಲಿ ಬದುಕನ್ನು ನೀಗಿಸುವ ಅನಿವಾರ್ಯತೆಯ ವಾಸ್ತವ ದರ್ಶನವಿದೆ.

ಕಾಲದ ಹೊಡೆತಕ್ಕೆ ಸಿಲುಕಿದ ಸಮಾಜದಲ್ಲಿ ನಿರೀಕ್ಷೆ ಮಾಡದ, ತಾವು ಅಂದುಕೊಂಡದ್ದಕ್ಕಿಂತ ಭಿನ್ನ ಘಟನೆಗಳು ಎದುರಾಗುವುದನ್ನು ಅನಾವರಣಗೊಳಿಸಿದ್ದಾರೆ.

**ಮಂತ್ರಿಮಂಡಲ ಬಿತ್ತು**
**ಎಲ್ಲೊ ಉರುಳಿತು ರೈಲು – ಹೋದರೆನಿಬರೊ ಸತ್ತು ;**
**ಕಂಡು ಕೇಳದ ಭಯಂಕರ ಅಗ್ನಿಯಪಘಾತ –**
**ಒಂದೆ, ಎರಡೇ, ಹೇಳು–ನೂರು ಬಗೆಯ ದುರಂತ,**
**ಎತ್ತ ನೋಡಿದರು ಕೊಲೆ–**

ಇವೆಲ್ಲವೂ ನಿರೀಕ್ಷಿಸದ ವಾಸ್ತವ ಸಂಗತಿಗಳಾಗಿ ಕಾಲ ನಿರ್ಣಯದ ಪ್ರತೀಕಗಳಾಗಿವೆ. ಹಾಗಾಗಿ ಕಾಲವನ್ನು ದುಷ್ಟ ಹಗೆಯಂತೆಯು, ಆಪ್ತಮಿತ್ರನಂತೆಯು ಎಂದು ಪರಿಭಾವಿಸುತ್ತಾ ಕಾಲೇಜಿನ ತರಗತಿಯ ವೇಳೆಯ ಸಂದರ್ಭವನ್ನು ಬದುಕಿನ ಕಾಲಕ್ಕೆ ಹೋಲಿಕೆ ಮಾಡಿ ಬದುಕಿನಿಂದ ಬಿಡುಗಡೆ ನೀಡಿ ಬೇಗ ಮುಕ್ತಿಯ ಕರುಣಿಸು ಎಂಬ ಬೇಡಿಕೆ ಇಡುವುದರ ಮೂಲಕ ಬದುಕಿನ ನೈಜ ಘಟನೆಗಳನ್ನು ಚಿತ್ರಿಸಿದ್ದಾರೆ.

**'ಅನಂತ–ಪೃಥ್ವೀ'** ಕವನ ಸಂಕಲನದ **'ಪ್ರಾರ್ಥನೆ'** ಕವಿತೆಯಲ್ಲಿ ಕವಿ ತನ್ನನ್ನು ಬಿದಿರಿಗೆ ಹೋಲಿಸುತ್ತಾ ಜೀವನವನ್ನು ಸಾರ್ಥಕಗೊಳಿಸಬೇಕೆಂದು ಕೃಷ್ಣನ ಮೊರೆ ಹೊಕ್ಕಿದ್ದಾರೆ ಬರಿಯ ಬಿದಿರಾಗಿ ಇಲ್ಲಿರುವ ಬದಲು ನಿನ್ನ ಕೈಯ ಕೊಳಲಾಗಿ ಮಂಜುಲಗಾನವಾಗಬೇಕೆಂಬ ಹೆಬ್ಬಯಕೆಯಿದೆ.

**ನಿನ್ನಧರ ಕರಸ್ಪರ್ಶದಲಿ ಪಡೆಯಲೀ ಕೊಳವೆ**
**ಧನ್ಯತೆಯನಿಂಪ ಸೂಸಿ !**
**ಆಲಿಸಿದ ಕಿವಿ ಗೇಯವನು ಮೆಚ್ಚಿದೊಡೆ ಸಾಕು;**
**ಮೇಲಾದ ಬಯಕೆಯುಂಟೆ ?** – ಎಂದಿದ್ದಾರೆ.

ಜೀವನ ಬಲು ಜಂಜಾಟ, ಗಡಿಬಿಡಿ, ಇದರ ಜೊತೆ ಮುಂದುವರೆಯಲಾರೆ ಎನ್ನುತ್ತಾ

**ನನ್ನ ಸರ್ವಸ್ವವನ್ನು ಸುಲಿದುಬಿಡು, ಓ ಚೋರ,**
**ಪೊಳ್ಳೆನಿಸು ಮುರಲಿಯಂತೆ,**
**ಒಂದೆ ಚಣ ಹಾಡಿ ಬೀಸಾಡು ದೂಳಿಯೊಳೆನ್ನ;**
**ಚಿರವಲ್ಲ, ಬಲ್ಲೆ ನಾನು.**

ಈ ಸಾಲುಗಳು ಬದುಕಿನಲ್ಲಿ ನಾನು, ನನ್ನದು ಎಂಬ ಅಹಂಕಾರದಿಂದ ಕೂಡಿ ಸಾರ್ಥಕತೆಯನ್ನು ಕಳೆದುಕೊಳ್ಳುವ ಸಮಯ ಬರುತ್ತದೆ. ಅದನ್ನು ಹೋಗಲಾಡಿಸಿ ಕೊಳಲಿನಂತೆ ಮಾಡು ನನ್ನನ್ನು ಎಂಬ ದೈನ್ಯ ನಿವೇದನೆ ಇದೆ.

**ಗೋಪಾಲ, ವಾತ್ಸಲ್ಯದೋರು ಶರಣಾಗಿಹೆನು,**
**ಶಾಪವನು ಕಳೆದು ಸಲಹು.**
**ಹರಡಲೀ ಭೂಮಿ ಆಕಾಶಗಳನೆನ್ನಿಂದ**
**ಹೊರಟ ತವಗೇಯಧಾರೆ !**

ನನ್ನನ್ನು ಕೊಳಲಾಗಿಸಿ ನನ್ನಿಂದ ಹೊರಟ ಗೇಯರಾಗ ಎಲ್ಲೆಲ್ಲಿಯೂ ಹರಡುವ ಮೂಲಕ ನನ್ನ ಜೀವನ ಸಾರ್ಥಕಗೊಳಿಸು ಎಂಬ ಪ್ರಾರ್ಥನೆ ಈ ಕವಿತೆಯಲ್ಲಿದೆ.

**'ಸವಾಲು'** ಕವನದಲ್ಲಿ ಮರುಭೂಮಿಯಂಥ ಬರಡು ಜೀವನ ನಡೆಸುತ್ತಿರುವ ಮನುಷ್ಯ ಪುರಾಣ, ಮಹಾಕಾವ್ಯಗಳಲ್ಲಿ ಬಣ್ಣಿಸಿದ ಭವ್ಯ ಬದುಕನ್ನು ನೆನೆದು ಇಂದು ಅದರಿಂದ ವಂಚಿತವಾಗಿರುವುದಕ್ಕೆ ಮರುಕ ವ್ಯಕ್ತಪಡಿಸುತ್ತಾ ದೇವರಿಗೆ ಸವಾಲನ್ನು ಎಸೆದಿರುವ ದಿಟ್ಟತನವನ್ನು ಕಾಣಬಹುದು.

ನಾವು ಓದಿದ ಗ್ರಂಥ, ಕೇಳಿದ ಕಥೆಗಳನ್ನೆಲ್ಲ, ನೆನೆಯುತ್ತ ಅಂದಿಗೂ, ಇಂದಿಗೂ ಇರುವ ಅಂತರ ಕಂಡು ಬೆರಗಾಗಿದ್ದಾರೆ.

**ಎಲ್ಲಿ ಹಾರುವ ಬೆಟ್ಟ, ಮಂದರ ಕಡಲ ಕಡೆಯುವ ಸಾಹಸ,**
**ಎಲ್ಲಿ ಕಿನ್ನರ ಯಕ್ಷ ಗಂಧರ್ವಾದಿ ಸಿದ್ಧ ದಿವೌಕಸ ?**
**ಸುತ್ತಿ ಚಾಪೆಯ ತೆರದಿ ಭೂಮಿಯನೆತ್ತಿ ನಡೆದನು ದಾನವ–**
**ಇಂದು ಇಂತಹುದುಂಟೆ, ಕಾಯ್ವನೆ ಕೃಷ್ಣ ಹೆಣ್ಣಿನ ಮಾನವ ?**

ಎಂಬ ಪ್ರಶ್ನೆಗಳನ್ನು ಹಾಕುತ್ತಾ ಇವೆಲ್ಲ ಸತ್ಯವೋ ಇಲ್ಲ ಕೇವಲ ಕಟ್ಟು ಕಥೆಗಳೋ ಯಾವುದೂ ತಿಳಿಯದೆ "ಗುರಿಯನರಿಯದೆ ಬರಿದೆ ಮರುಗುವ ಕೊರಗಿ ಕರಗುವ ಬಾಳಿದು" ಎಂದು ಜೀವನ ರೀತಿಗೆ ಅಚ್ಚರಿ ವ್ಯಕ್ತಪಡಿಸಿದ್ದಾರೆ. ಮುಂದುವರಿದು ದೇವನಿರುವುದು ಸತ್ಯವಾದರೆ

ಬೇರೆ ಏನನ್ನೂ ಕೇಳದೆ "ನಿನ್ನ ರೂಪವನೊಮ್ಮೆ ತೋರಿಸಿ ಹೋಗು, ಅದೆ ಸಾಕೆನ್ನುವೆ" ಎನ್ನುತ್ತಾರೆ. ಅಷ್ಟೇ ಅಲ್ಲದೆ

**ನಾವು ಮಾಡುವ ಪಾಪವೆಲ್ಲವ ನೋಡಿಯೂ ಈ ಮೌನವೇ?**
**ತೋರದೇತಕೆ ನಿನ್ನ ಬಲದಾಟೋಪ, ನೀನೂ ಹೇಡಿಯೆ?**

ಎಂಬ ದಿಟ್ಟ ಪ್ರಶ್ನೆ ಎತ್ತುತ್ತಾ, ಗುಡುಗು, ಸಿಡಿಲು, ಶೂಲಿಯ ಫಾಲನೇತ್ರಗಳು ನಮ್ಮನ್ನು ಸುಟ್ಟು ಕೆಡಹಲಿ ಎಂದಿದ್ದಾರೆ. ಮುಂದುವರಿದು ಸ್ವರ್ಗಮರ್ತ್ಯವ ಬೆಸೆದ ಹಿಂದಿನ ಆ ದಿನಗಳು ಬರಬೇಕಾದರೆ–

**ಮತ್ತೆ ಬೃಂದಾವನದ ಕೊಳಲುಲಿ ನಮ್ಮ ಕಿವಿಯನು ತಣಿಸಲಿ,**
**ಮತ್ತೆ ನಟರಾಜಾಗ್ನಿತಾಂಡವ ನಮ್ಮ ಮನಗಳ ಮಣಿಸಲಿ,**
**ಕಂಬಕಂಬವನೊಡೆದು ಮೂಡಿ ವಿಜೃಂಭಿಸಲಿ ನರಕೇಸರಿ,**
**ಬರಲಿ ಕಲ್ಕಿಯ ಕುದುರೆ, ಬರಲಿ ಎಂತೂ ದಿವ್ಯದ ಐಸಿರಿ.**

ಕಣ್ಣಿಗೆ ಕಾಣದ ದೈವವನ್ನು ನಂಬುವುದಕ್ಕೆ ಬದಲಾಗಿ ಪಾಪನಾಶವ ಮಾಡಿ ಸತ್ಯ, ಪುಣ್ಯಗಳ ಜೀವನ ನಿರ್ಮಿಸುವುದಾದರೆ ಆಗ ನಂಬುವೆ, ಶ್ರದ್ಧೆ ತಳೆಯುವೆ, ಆಗ ಮಾತ್ರ ಬಂಜೆ ಬದುಕಿಗೆ ಅರ್ಥ ದೊರೆಯಿತೆಂದು ಭಾವಿಸುವೆ ಎಂದು ಸವಾಲೆಸೆದಿರುವುದು ಸಮಾಜ ಜೀವನದ ಬದಲಾವಣೆ ಬಯಸಿರುವುದನ್ನು ವ್ಯಕ್ತಪಡಿಸುತ್ತದೆ.

**'ಅನಂತ–ಪೃಥ್ವೀ'** ಕವನ ಸಂಕಲನದ **'ಗ್ರಂಥಾಲಯದಲ್ಲಿ'** ಕವಿತೆಯು ಮನುಷ್ಯನ ಅಹಂಭಾವವನ್ನು ಹೇಳುತ್ತಾ, ಜ್ಞಾನ ಸಾಗರದಲ್ಲಿ ಒಂದು ಹನಿಯಷ್ಟನ್ನು ಮಾತ್ರ ಪಡೆಯಲು ಸಫಲವಾಗಿರುವೆವು ಎಂಬ ಸತ್ಯವನ್ನು ತಿಳಿಸಿದ್ದಾರೆ.

**ಕಣ್‌ದಿಟ್ಟ ಹರಿದತ್ತ ಗ್ರಂಥಗಿರಿ ಪಂಕ್ತಿಗಳು**
**ನಿಂತು ಬೆರಗೀಯುತಿವೆ ಪುಸ್ತಕಾಲಯದಲ್ಲಿ.**
**ಇವುಗಳಡಿ ನಾ ದೂಳ ಕಣವಾಗಿ ನಿಲ್ಲುವೆನು–**
**ಚಣಕಾಲ ಬಂದು ನಿಂತರೆ ಸಾಕು, ನನ್ನ ಮತಿ**
**ಮುದುಡಿ ಹೋಗುವುದಿಲ್ಲ, ನನ್ನಹಂಕಾರವನು**
**ನುಚ್ಚು ನೂರಾಗಿಸುವುದೀ ತಾಣ ಅಪ್ಪಳಿಸಿ !**

ಎಂಬುದು ಎಲ್ಲವನ್ನು ಬಲ್ಲೆ ಎಂದು ಕೊಂಡರೆ ಅದು ತಪ್ಪು ಗ್ರಹಿಕೆ. ಲೋಕದಲ್ಲಿ ತಿಳಿಯುವುದು ಬಹಳಷ್ಟಿದೆ ಎಂಬುದನ್ನು ತಿಳಿಸುತ್ತದೆ.

ಪುಸ್ತಕಾಲಯದಲ್ಲಿ ನೆರೆದಿರುವ ಹಿರಿಯ ಬಾಳುಗಳ ಮೇಳವನ್ನು ತಿಳಿಯಲು ನಮಗೆ ಸಾಧ್ಯವಾಗಿಲ್ಲ ಎಂಬುದನ್ನು ವಿಶ್ವಪರ್ಯಟನೆಗೆ ಹೊರಟ ಪಾರ್ಥ ಕೂಡ ಅಹಂಭಾವದಿಂದ ತನ್ನ ಮಗನಿಂದಲೇ ಸೋತ ಸಂದರ್ಭದೊಂದಿಗೆ ಮನುಷ್ಯನ ನಾನತ್ವವನ್ನು ನುಚ್ಚು ನೂರಾಗಿಸುವ ಪ್ರಕ್ರಿಯೆ ಮನೋಜ್ಞವಾಗಿ ಮೂಡಿಬಂದಿದೆ.

**'ಅನಂತ–ಪೃಥ್ವೀ'** ಕವನ ಸಂಕಲನದ 'ಮತ್ತೆ ಕರೆಯುವೆ ನಿನ್ನ' ಕವನದಲ್ಲಿ ಮನುಷ್ಯನ ಚಂಚಲ ಮನಸ್ಸನ್ನು ವ್ಯಂಗ್ಯ ಭಾವಗಳ ಮೂಲಕ ಕುಟುಕುವ ಪ್ರಯತ್ನ ಮಾಡಲಾಗಿದೆ.

**ಕವನ ಕಾಮಿನಿ ಇಲ್ಲಿ ಬಾರದಿರು ಓ ತಾಯೆ ;**
**ನನ್ನ ಮನೆಯಿದು ಕಸದ ಬೀಡಾಗಿದೆ,**
**ಮುರಿದ ಗೂಡಾಗಿದೆ !**

ಇಲ್ಲಿ ಮನಸ್ಸನ್ನು 'ಮನೆಗೆ' ಹೊಲಿಸುತ್ತಾ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ ಎಂಬ ಭೂತ ಪ್ರೇತಗಳಿಂದ ತುಂಬಿ ಮನಸ್ಸು ಚಂಚಲಗೊಂಡು ಅಪ್ರಯೋಜಕ ವಿಚಾರಗಳ ಬೀಡಾಗಿದೆ. ಈಗ ಬಂದರೆ ಅವುಗಳ ಪ್ರತೀಕವಾದ ಕಾವ್ಯಗಳು ರಚನೆಯಾಗಬಹುದು. ಹಾಗಾಗಿ ಚಂಚಲ ಮನಸ್ಸನ್ನು ಕಿತ್ತೆಸೆದು ಬೇಡವಾದ ವಿಷಯಗಳಿಂದ ಮುಕ್ತಗೊಂಡು ನಾ ನಿನ್ನ ಆಹ್ವಾನಿಸುವೆನು. ಅಂದು ಹರಸಿ ಎನ್ನ ಬಾಳ ಬೆಳಗಲು ಬಾ ಎಂಬ ಬಯಕೆಯನ್ನು ಕವಿ ವ್ಯಕ್ತಪಡಿಸಿದ್ದಾರೆ.

**'ಅನಂತ–ಪೃಥ್ವೀ'** ಕವನ ಸಂಕಲನದ 'ಪರೀಕ್ಷೆ' ಕವಿತೆಯು ಮನುಷ್ಯನ ಬದುಕು ಒಂದು ಪರೀಕ್ಷೆ. ಅಲ್ಲಿ ಪ್ರಶ್ನೆಗಳದ್ದೆ ಸಂತೆ ಎಂಬುದರ ಮೂಲಕ ಶಾಲೆಯಲ್ಲಿ ಪ್ರಮಾಣ ಪತ್ರಕ್ಕಾಗಿ ಬರೆಯುವ ಪರೀಕ್ಷೆಯೊಂದಿಗೆ ನೈಜ ಜೀವನದಲ್ಲಿ ಎದುರಾಗುವ ತೊಡುಕುಗಳನ್ನು ಸ್ವಸಾಮರ್ಥ್ಯದಿಂದ ಎದುರಿಸಬೇಕಾದ ಅನಿವಾರ್ಯತೆಯನ್ನು ಕಟ್ಟಿಕೊಟ್ಟಿದ್ದಾರೆ.

ಬದುಕು ಪ್ರಶ್ನೆಗಳ ಸಂತೆ ಯಾವಾಗ ಏನು ಉದ್ಭವಿಸುವುದೋ ನಾ ಕಾಣೆ ಹುಟ್ಟಿನಿಂದ ಮಸಣದವರೆಗಿನ ಬದುಕೆಲ್ಲ ಪ್ರಶ್ನೆಯೇ. ಅದಕ್ಕೆ ಉತ್ತರ ಹುಡುಕುತ್ತಾ ಹೋದಂತೆಲ್ಲ ಅದು ಕೇವಲ ವಿಮರ್ಶೆಯಾಗುತ್ತದೆಯೇ ವಿನಹ ಉತ್ತರವಾಗಲಾರದು, ಹಾಗಾಗಿ ಬದುಕಿನಲ್ಲಿ ಯಾವಾಗ, ಏನು, ಹೇಗೆ ಯಾವ ಪರೀಕ್ಷೆ ಬರುತ್ತದೆ ಎಂದು ಹೇಳಲು ಅಸಾಧ್ಯವಾಗಿದೆ.

**ಅದಿರಲಿ...**
**ಎಲ್ಲವನು ಗಮನಿಸುತ ನಿಂತಿರುವ ಮಹರಾಯ**
**ಮಾಡಬಾರದೆ ಸ್ವಲ್ಪವಾದರು ಸಹಾಯ ?**

ಎಂದು ನಮ್ಮ ಬದುಕಿನ ಬಂಡಿಯ ಸಾರಥಿಯನ್ನು ಪ್ರಶ್ನಿಸುವ ಅಧಿಕಾರದ ಧ್ವನಿಯನ್ನು ಕಾಣಬಹುದು.

**ಗೊಣಗದಿರು ಮರಳಿ....**
**ಮುಂದಿನ ಫಲವು ಏನೋ ಎಂಬ ಅಂಜಿಕೆಯ ತೆಗೆ :**

ಎನ್ನುತ್ತಾ ಬದುಕು ಬಿಡಿಸಲಾರದ ಪ್ರಶ್ನೆ. ಇಲ್ಲಿ ಏನೇ ಕಷ್ಟಗಳು ಬಂದರು ಮುಂದೆ ಸಿಗುವ ಫಲ ಎಂದೋ ಅಥವಾ ಏನಾಗುವುದೋ ಎಂದು ಅಂಜದೆ ಮುಂದೆ ಜೀವನದಲ್ಲಿ ತೆರ್ಗಡೆಯಾದವರ ನೆನೆದು ನಿನ್ನ ಮೇಲೆ ನಂಬಿಕೆ ಇಟ್ಟು ಬದುಕಿನ ಪರೀಕ್ಷೆ ಎದುರಿಸು. ಎಲ್ಲಾ ಬವಣೆಗಳಿಗೂ ನೀನೆ ಉತ್ತರ ಕಂಡು ಕೋ ಎಂದಿದ್ದಾರೆ. 'ನಂಬು ನಿನ್ನನೆ ನೀನು ಬರೆ ಉತ್ತರ' ಎಂಬುದರ ಮೂಲಕ ತಮ್ಮ ಬದುಕಿನ ಬವಣೆಗಳನ್ನು ಅವರವರೆ ಸರಿಪಡಿಸಿಕೊಂಡು ಮುನ್ನಡೆಯಬೇಕು ಎಂಬುದನ್ನು ಬದುಕಿನ ವಾಸ್ತವದ ನೆಲೆಯ ಮೂಲಕ ಬಿಡಿಸಿಟ್ಟಿದ್ದಾರೆ.

'ಅನಂತ-ಪೃಥ್ವೀ' ಕವನ ಸಂಕಲನದ 'ನನ್ನ ಗಡಿಯಾರವನು ತಿದ್ದಲೊಲ್ಲೆ !' ಕವನದಲ್ಲಿ ತನ್ನ ಬದುಕನ್ನೇ ತಿದ್ದಿಕೊಳ್ಳದ ಮನುಷ್ಯ ಮತ್ತೊಬ್ಬರ ಬದುಕನ್ನು ತಿದ್ದುವ ಮತ್ತು ಅನ್ಯರ ಮಾತಿಗೆ ತನ್ನ ಬದುಕ ತಿದ್ದಿಕೊಳ್ಳುವುದನ್ನು ಕವಿ ವಿರೋಧಿಸಿರುವುದನ್ನು ಕಾಣಬಹುದು.

**ಅಂದು ತುಂಬಿದ ಬಸ್ಸಿನಲಿ ಯಾರೊ ಕೇಳಿದರು :**
**'ನಿಮ್ಮ ಗಡಿಯಾರದಲಿ ಗಂಟೆಯೆಷ್ಟು ?'**
**ನೋಡಿದೆನು ಏಳು ಮೂವತ್ತರಲಿ ಮುಳ್ಳಿತ್ತು :**
**ಅವರ ಗಡಿಯಾರದಲಿ ಗಂಟೆ ಎಂಟು !**

ಗಡಿಯಾರಕ್ಕೆ ತನ್ನ ಬದುಕನ್ನು ಹೋಲಿಸಿಕೊಳ್ಳುವ ಕವಿ, ಯಾರದೋ ಜೀವನ ನೋಡಿ ನಾನು ಕೂಡ ಹಾಗೆಯೇ ಇರಬೇಕೆಂದುಕೊಳ್ಳುವುದು ತಪ್ಪು ಗ್ರಹಿಕೆ, ತನ್ನ ಬದುಕು ಸರಿಯಿದೆ ಎಂದರೆ ಬೇರೆಯವರ ಮಾತಿಗೆ ಏಕೆ ಬೆಲೆ ಕೊಡಬೇಕು? ಎಂಬುದನ್ನು

**ನನ್ನ ಕೈಗಡಿಯಾರ ರೇಡಿಯೋ ಕಾಲಕನುಸಾರ**
**ಅದ ನಾನು ಚೆನ್ನಾಗಿ ಬಲ್ಲೆ,**
**ಇದು ನನ್ನ ವಸ್ತು, ಎಂದಿಗು ನನ್ನದಾಗಿರಲಿ**
**ಅವರಿವರ ಕೈನೋಡಿ ತಿದ್ದಲೊಲ್ಲೆ !**

ಇದು ನನ್ನ ಬದುಕು. ನಿರ್ಧಾರವು ನನ್ನದೆ ಆಗಿರಲಿ ಎಂಬ ದೃಢ ನಿರ್ಧಾರದೊಂದಿಗೆ ಸಮಾಜಕ್ಕೆ ಸಂದೇಶ ಕೊಡುವುದರ ಜೊತೆಗೆ ತಮ್ಮ ಗೊಂದಲ ಪರಿಹರಿಸಿಕೊಂಡಿರುವ ಬಗೆ ಮಹತ್ವದಾಗಿದೆ.

'ಅನಂತ-ಪೃಥ್ವೀ' ಕವನ ಸಂಕಲನದ 'ಅಂದು-ಇಂದು' ಕವಿತೆ ಬಿಳಿ ಹಾಳೆಯ ಮುಗ್ಧ ಮನಸ್ಸಿನ ಬಾಲ್ಯಜೀವನ ಹಾಗೂ ಆಸೆ, ಆಕಾಂಕ್ಷೆ ನಿರೀಕ್ಷೆ, ಮೋಸ, ಕಪಟ, ವಂಚನೆ, ಒತ್ತಡದಿಂದ ಕೂಡಿದ ಪ್ರಸ್ತುತ ಬದುಕುಗಳ ವ್ಯಾತ್ಯಾಸ ತಿಳಿಸಿದ್ದಾರೆ.ಮನುಷ್ಯನ ಮನಸ್ಸಿನ ಒತ್ತಡ ತಣಿಸಿ ನೆಮ್ಮದಿ ತರುವ ದೂತ ನಿದ್ದೆ. ಅದನ್ನು –

**ಮಧುರ ಮೋಹಿನಿ ನಿದ್ದೆ,**
**ಎಳೆತನದೊಳೆಲ್ಲೆಡೆಯು ನೀನೆನ್ನ ಬಳಿಯಿದ್ದೆ !**
**ಮುಟ್ಟ ಆಶೀರ್ವದಿಸೆ ನಿನ್ನ ಮಾಯಾದಂಡ,**
**ಅರಿವಿನಿಂದುರುಳುತಿದ್ದಿತು ನಿಖಿಲ ಬ್ರಹ್ಮಾಂಡ !**
**ಅಂದೆನಗೆ ನಿನ್ನಂಕ**
**ಇಂದ್ರಸಿಂಹಾಸನವ ಮೀರಿಸಿದ ಪರ್ಯಂಕ !**

ಹೀಗೆ ಎಳೆತನದಲ್ಲಿ ಓಲೈಸಿ ಆಶ್ರಯ ನೀಡಿದ ನಿದ್ರಾದೇವತೆ ಇಂದು ಕಣ್ಮರೆಯಾಗಿರುವುದನ್ನು ಕುರಿತು–

**ಈಗೆಲ್ಲಿಹವು ಬಾಳಗೋಳುಗಳ ಕಡಲಿನಲಿ**
**ಆಶ್ರಯವ ಕೊಡಬಲ್ಲ ನಿನ್ನ ದ್ವೀಪ ? –**

ಎಂಬ ಪ್ರಶ್ನೆ ಎತ್ತಿದ್ದಾರೆ. ಅಷ್ಟೇ ಅಲ್ಲ ಈ ಬಾಳಿನಗೋಳಿನಲ್ಲಿ ಹಗಲಿರುಳು ದುಃಸ್ವಪ್ನಗಳ ಆಟವೇ ನಡೆಯುತ್ತಿರುವುದನ್ನು ಕಂಡು ನೊಂದಿರುವುದು ಬದುಕಿನ ವಿಷಮ ಸ್ಥಿತಿಯನ್ನು

ತಿಳಿಸುತ್ತದೆ. ಕಣ್ಣು ಮುಚ್ಚಿದರೆ ಸಾಕು ಸುಂದರ ನೋಟಕ್ಕೆ ಬದಲಾಗಿ ಅಪಶಕುನವನ್ನೇ ಸೂಚಿಸುವ ದೊಡ್ಡ ಸಂತೆಯೇ ಎದುರಾಗುತ್ತದೆ. ಅದನ್ನು ಚಿತ್ರಮಂದಿರಕ್ಕೆ ಹೋಲಿಸಿ ಹೇಳಿದ್ದಾರೆ.

**ಚಿತ್ರಮಂದಿರದಲ್ಲಿ**
**ಬೆಳಕು ಆರಿದ ಚಣವೆ**
**ರಜತಪರದೆಯ ಮೇಲೆ**
**ಚಿತ್ರಕೂಟವು ಹಾದು ಹೋಗುವಂತೆ !**

**'ಅನಂತ-ಪೃಥ್ವೀ'** ಕವನ ಸಂಕಲನದ **'ಪತನ'** ಕವಿತೆಯ ಮೂಲಕ ಬದುಕಿನಲ್ಲಿ ಯಾವುದು ಶಾಶ್ವತವಲ್ಲವೇಕೆ? ಬದುಕೇ ಶಾಶ್ವತವಲ್ಲ, ಎಂದ ಮೇಲೆ ನಾನು ಶ್ರೇಷ್ಠ ಎಲ್ಲಕ್ಕಿಂತ ಎಲ್ಲರಿಗಿಂತ ಮಿಗಿಲು ಎಂಬ ಭಾವನೆ ನಮ್ಮ ಗರ್ವದ ಪ್ರತೀಕ ಎಂಬುದನ್ನು ಸೌಂದರ್ಯದ ಪ್ರತೀಕವಾದ ತಲೆಗೂದಲ ಉದಾಹರಣೆಯ ಮೂಲಕ ಕಟ್ಟಿಕೊಡುವ ಪ್ರಯತ್ನ ಮಾಡಿದ್ದಾರೆ.

ಕಾಲ ನಿಲ್ಲುವುದಿಲ್ಲ, ಅದರ ಹೊಡೆತಕ್ಕೆ ಸಿಕ್ಕ ಚಿಗುರಲೆ ಹಣ್ಣೆಲೆಯಾಗುವುದನ್ನು ಯಾರಿಂದಲೂ ತಡೆಯಲು ಸಾಧ್ಯವಿಲ್ಲ ಎಂಬುದನ್ನು ಸೌಂದರ್ಯದ ಪ್ರತೀಕವಾದ ತಲೆಗೂದಲಿಗೂ ಕತ್ತರಿ ಬೀಳಲಿದೆ ಎಂಬುದನ್ನು ಧ್ವನಿಸುವುದರ ಮೂಲಕ ಹೇಳಿದ್ದಾರೆ. ಇಷ್ಟು ದಿವಸ ನನ್ನಿಂದ ವ್ಯಕ್ತಿತ್ವ ಪಡೆದ ದೇಹಕ್ಕೂ ಕರುಣೆ ಬರಲಿಲ್ಲವೇ ಎಂದು ಪ್ರಾಣಪಕ್ಷಿ ವಿಧಿಯ ಬಂಧಿಯಾಗುವಾಗ ಕೇಳುವಂತೆ ಮೂಡಿ ಬಂದಿದೆ. ಇದಕ್ಕೆ –

**ಯಾರ ದೂರಿದೊಡೇನು ?**
**ನನ್ನ ಗರ್ವಕೆ ಆಯಿತಿಂಥ ಪತನ**
**ನಾನಿಂದು ನಗೆಗೀಡು ; ಮುಂದೆ ಹೇಳುವುದೇನು ?**
**ಸಾಕಿಷ್ಟು ಕಥನ !**

ಹೀಗೆ ಬದುಕು ಶಾಶ್ವತವಲ್ಲ ಎಂಬುದನ್ನು ಮಾರ್ಮಿಕವಾಗಿ ಹೇಳಿದ್ದಾರೆ.

**'ಅದ್ಭುತ'** ಕವಿತೆಯಲ್ಲಿ ಮಗುವಿನ ವರ್ಣಿಸಲಾಗದ ಅದ್ಭುತಗಳನ್ನು ತೆರೆದಿಟ್ಟಿದ್ದಾರೆಮನುಷ್ಯ ತಾನು ನಿತ್ಯ ಕಾಣಲಾಗದ ನಿರ್ಜೀವ ವಸ್ತುಗಳನ್ನು ಅದ್ಭುತವೆಂದು ಪಟ್ಟಿ ಮಾಡಿದ್ದಾರೆ. ಆದರೆ ನಿತ್ಯ ಜೀವನದಲ್ಲಿ ನೈಸರ್ಗಿಕವಾಗಿ ನಡೆಯುವ ತಾಯಿ-ಮಗುವಿನ ಸಂಬಂಧದ ಅದ್ಭುತ ಲೀಲೆಯನ್ನು ಅರಿಯುವಲ್ಲಿ ಸೋತಿದ್ದಾನೆ ಎಂಬುದನ್ನು

**ನಾ ಕಂಡ ಬೆರಗು ಇದು : ಎರಡು ತಿಂಗಳ ಮಗಳು**
**ನನ್ನವಳು ತಾಯೆದೆಯ ಹಾಲನೀಂಟುವ ನೋಟ !**
**ಕಣ್ಣು ಮುಚ್ಚಿವೆ, ನಿದ್ದೆಯೋ ಏನೊ – ಆದರೂ**
**ಮೊಲೆ ತುಟಿಗೆ ಸೋಂಕಿದೊಡೆ ಇವಳ ಮೈಯಲಿ ಯಾವ**
**ಅರಿವೊ ಸಂಚರಿಸಿ ಗುಟುಕರಿಸುವಳು ಬಾಯಿಟ್ಟು !**
**ತಾಯಿ ಮಲಗಿಸಿ ಎಲ್ಲೊ ಮರೆಯಾದರೀ ಪೋರಿ**
**ಪುಟ್ಟ ಕಣ್ಣುಗಳೆರಡ ಅರೆತರೆದು ಹೆತ್ತವಳ**
**ಮುಖವ ಹುಡುಕುವ ಪರಿಯೊ ಮರೆಯಲಾಗದ ಮಾಟ !**
**ಸೃಷ್ಟಿಯಲಿ ಅನುಪಮವು ತಾಯಿ-ಹಸುಳೆಯ ಆಟ !**

ಎಂಬ ಭವ್ಯ ಚಿತ್ರಣದ ಮೂಲಕ ಕಟ್ಟಿಕೊಟ್ಟಿದ್ದಾರೆ. ಹೀಗೆ 'ಮಗುವಿನಾಟ ಆಡಲಾರನು ದೊಂಬನು' ಎಂಬಂತೆ ವರ್ಣಿಸಲಾಗದ ನಟಿಸಲಾಗದ ಮಗುವಿನ ಅದ್ಭುತ ಆಟ ಜಗತ್ತಿನ ಉಳಿದೆಲ್ಲಾ ಅದ್ಭುತಗಳಿಗೂ ಮಿಗಿಲು ಎಂಬ ಆಶಯ ಅಭಿವ್ಯಕ್ತಿಗೊಂಡಿದೆ.

**'ಪ್ರಕೃತಿ'** ಕವನ ಸಂಕಲನದ **'ಮೊರೆ'** ಕವನದಲ್ಲಿ ಪ್ರಸ್ತುತ ಸಮಾಜದ ಮನುಷ್ಯನ ಬದುಕಿನ ದುಸ್ಥಿತಿಯ ಚಿತ್ರಣವಿದೆ.

**ಇಲ್ಲಿ ಬರಬೇಡಿ ಓ ಬಂಧು ಮಹನೀಯರೇ,**
**ದಯವಿಟ್ಟು ಬರಬೇಡಿ !**
**ನೀವೇನು ದೂರದವರಲ್ಲ, ನಮ್ಮವರೇ,**
**ನನಗೂ ನಿಮಗೂ ಹೊಕ್ಕುಳಬಳ್ಳಿ ಸಂಬಂಧ :**
**ಅಲ್ಲವೆಂದವರಾರು?**
**ಆದರೂ–**
**ನನ್ನ ಪಾಡಿಗೆ ನನ್ನ ಬಿಟ್ಟುಬಿಡಿ ನಂಟರೇ,**
**ಹೇಗೊ ನೆಮ್ಮದಿಯಾಗಿ ಕಾಲ ತಳ್ಳುತ್ತೇನೆ !**

ಎಂಬ ಧೈನ್ಯ ಭಾವದೊಂದಿಗೆ ನೀವೆಲ್ಲ ಬಂದಾಗ ಉತ್ಸಾಹ, ಸಂತೋಷ ಸಂಭ್ರಮದಿಂದ ಹಿರಿಹಿರಿ ಹಿಗ್ಗುತ್ತೇನೆ. ಹೋದ ಮೇಲೆ ಉಳಿಯುವುದು ಬರೀ ಮನೆ. 'ಉಂಡು ಹೋದ ಕೊಂಡು ಹೋದ' ಎಂಬ ಗಾದೆಯಂತೆ

ಆಗ ನನಗನಿಸುತ್ತೆ–

**ತೂಬು ತೆರದು ನೀರೆಲ್ಲ ಸೋರಿ ಬರಿದಾದ ಕರೆಯ ಹಾಗೆ;**

**ನಳನಳಿಸುವಂಥ ಬೆಳೆಗೆರಗಿ ಮಿಡತೆಯ ದಂಡು ಮೇಲೆದ್ದು ಹೋದ ಹಾಗೆ;**
**ಬಂದು ಬರ್ಬರ ದಂಡು ಊರ ಸೂರೆಯ ಮಾಡಿ, ಬರಿಯ ಧೂಳುಳಿದ ಹಾಗೆ**
**ರಸವ ತೊಟ್ಟೂ ಬಿಡದೆ ಹೀರಿ ಕಬ್ಬಿನ ಸಿಪ್ಪೆಯನ್ನು ಎಸೆದು ನಡೆದ ಹಾಗೆ !** –

ಎಂದು ವ್ಯಂಗ್ಯವಾಡಿದ್ದಾರೆ. ಬೆಲೆಗಳು ಏರುತ್ತಿರುವ ಇಂದಿನ ಕಾಲದಲ್ಲಿ ನನ್ನ ಗಳಿಕೆ ಯಾವುದಕ್ಕೂ ಸಾಲದು. ಸಮಾಜ ಘಾತುಕರಂತೆ ನೀವು ತೆಗೆದುಕೊಳ್ಳುವರೆ ಹೊರತು ಕೊಡುವವರಲ್ಲ ಎಂದು ಸ್ವಾರ್ಥತೆಯ ಮುಖವಾಡವನ್ನು ಅನಾವರಣಾಗೊಳಿಸುತ್ತಾ–

**ಆದ ಕಾರಣ, ಬಂಧು ಮಹನೀಯರೇ, ನೀವು ದಯೆದೋರಿರೋ ಸ್ವಲ್ಪ,**
**ಬರಬೇಡಿರೋ ಇಲ್ಲಿ ದಮ್ಮಯ್ಯ ;**
**ಬಿಟ್ಟು ಬಿಡಿ ನನ್ನ ಪಾಡಿಗೆ ನನ್ನ –**
**ಮರೆತು ಬಿಡಿ ನನ್ನ – ನಿಮ್ಮ ಸಂಬಂಧ !**

ಎಂಬ ನಿಷ್ಠುರದ ಮಾತುಗಳ ಮೂಲಕ ಬೆಲೆ ಏರಿಕೆ ಮತ್ತು ಸಹಾಯ ಮಾಡದ ಸಂಬಂಧಿಗಳ ಬಗ್ಗೆ ತಿರಸ್ಕಾರ ಭಾವ ಹೊಂದಿ ಸಂಬಂಧ ಕಡಿದುಕೊಳ್ಳಲು ಸಿದ್ಧವಿರುವುದು ಪ್ರಸ್ತುತ ಸಮಾಜದ ಸ್ಥಿತಿಯನ್ನು ಬಿಂಬಿಸುವಂತಿದೆ.

**'ಕಾಲ'** ಕವಿತೆಯು ಕಾಲವನ್ನು ಅಂಕೆಯಲ್ಲಿ ಇಟ್ಟುಕೊಳ್ಳಬಲ್ಲೆ ಎಂದು ಹೊರಟ ಮನುಷ್ಯನ ಮೂರ್ಖತನದ ಪ್ರತೀಕದಂತೆ ಮೂಡಿ ಬಂದಿದೆ. ಮನುಷ್ಯ ಹುಟ್ಟಿನಿಂದ ಸಾವಿನವರೆಗೂ

ಕಾಲವನ್ನು ತಾನು ಕಳೆಯುತ್ತಿದ್ದೇನೆ ಎಂದು ಹೊರಟು ಅದರೊಳಗೆ ತಾನೇ ಕಳೆದು ಹೊಗುತ್ತಿರುವುದನ್ನು, ಅದನ್ನು ಯಾರಿಂದಲೂ ತಡೆಯಲು ಸಾಧ್ಯವಿಲ್ಲ ಎಂಬ ಅರಿವನ್ನು ತಿಳಿಯದ ಮೂರ್ಖಮನುಷ್ಯ ಅದರಲ್ಲೆ ಹುದುಗಿ ಹೋಗಿರುವ ಸತ್ಯ ಸಂಗತಿಯನ್ನು ತಿಳಿಯಬಹುದು.

ಕಾಲನ ಕೈಗೆ ಸಿಕ್ಕಿ ಬಾಲ್ಯದಿಂದ ಮುಪ್ಪಿನವರೆಗೂ ಹಂತ ಹಂತವಾಗಿ ಜಖಂಗೊಂಡು ರಿಪೇರಿಯೆ ಆಗದೆ ಕೊನೆಗೊಮ್ಮೆ ಮಣ್ಣುಗೂಡಲೇಬೇಕು, ಇದರಿಂದ ಹೊರತಾದವರು ಯಾರು ಇಲ್ಲ ನಿಶ್ಯೇಷರಾಗಿ ಹೋಗುತ್ತೇವೆ ಎಂಬುದನ್ನು ತಿಳಿಸುತ್ತಾರೆ. ಆದರೆ ಎಲ್ಲಾವನ್ನು ತನ್ನೊಳಗೆ ಹುದುಗಿಸಿಕೊಂಡು ತಾನೊಬ್ಬನೇ ನಿರುಪಾಧಿಕವಾಗಿ ಉಳಿಯುತ್ತಾನೆ. ;ತೆಸ್ಮೈನಮಃ ಕಾಲಾಯ! ಎಂಬುದೇ ನಿತ್ಯ ಸತ್ಯವಾಗಿ ಪ್ರತಿಪಾದಿತವಾಗಿದೆ.

**'ಕೊರಗು'** ಕವಿತೆ ಮನುಷ್ಯನ ಬದುಕಿನ ಡೋಲಾಯಮಾನ ಸ್ಥಿತಿಯ ಪ್ರತೀಕವಾಗಿದೆ:

**ಶಿಖರ:**
**ಅದರ ಪಕ್ಕದಲ್ಲೇ ಪ್ರಪಾತ**
**ಅದರಲ್ಲೊಂದು ಚಣ ಇದರಲ್ಲೊಂದು ಚಣ**
**ಸಮತಲ ಭೂಮಿಯಲ್ಲಿ ಉಳಿದೆಲ್ಲ ಹೊತ್ತು**
**ಇದು ನಮ್ಮ ಬದುಕು !**

ಜೀವನದಲ್ಲಿ ಏರಿಳಿತಗಳು ಸಹಜವಾಗಿದ್ದು, ನಿರ್ಧಿಷ್ಟ ನೆಲೆಯೊಂದನ್ನು ಗುರ್ತಿಸಲು, ಕಟ್ಟಿಕೊಳ್ಳಲು ಸಾಧ್ಯವಿಲ್ಲ ಎಂಬುದೇ ನಮ್ಮ ಬಾಳಿನ ಬೆರಗು ಮತ್ತು ಕೊರಗು! ಎಂದು ಬದುಕಿನ ಅನಿಶ್ಚಿತತೆ ಮತ್ತು ಜೀವನ-ಪ್ರಕೃತಿಯ ಸಂಬಂಧವನ್ನು ಸೂಕ್ತ ಪ್ರತಿಮೆಗಳ ಮೂಲಕ ಮನೋಜ್ಞವಾಗಿ ಹೇಳಿದ್ದಾರೆ.

**'ನೆರಳು'** ಕವಿತೆಯಲ್ಲಿ ಮನುಷ್ಯನ ಜ್ಞಾನಂಧಾಕಾರವು ಧ್ವನಿತವಾಗಿದೆ.

**ನಾವು ಮರ್ತ್ಯರು ನೆರಳಿನಂಥವರು**
**ಶೂನ್ಯ ಶ್ರೀಮಂತರು !**
**ನಮ್ಮ ನೆರಳುಗಳೆ ಇದನ್ನುಸುರುತ್ತಿವೆ.**

ನಾವು ಸಾಮಾನ್ಯರು ನಮ್ಮೊಳಗೆ ಏನು ಇಲ್ಲ ಅದು ನೆರಳಿನಂತೆ ಭ್ರಾಂತಿ ಅದು ನಮ್ಮ ಜೀವನದುದ್ದಕ್ಕೂ ನಮಗರಿವಾಗದಂತೆ ಹಿಂಬಾಲಿಸುತ್ತದೆ. ನೆರಳು ದೇಹದ ಪ್ರತಿಬಿಂಬ ಮಾತ್ರವಲ್ಲದೆ ಮನಸ್ಸಿನ ಬಿಂಬ, ಮತ್ತು ನಡೆ ನುಡಿಯ ಪ್ರತೀಕವಾಗಿದ್ದು, ಅದರ ಅರಿವಾಗುವುದು ಬುದ್ಧನಂತೆ ಜ್ಞಾನೋದಯವಾದಾಗ ಮಾತ್ರ ಎಂಬ ತಾತ್ವಿಕ ನಿಲುವು ವ್ಯಕ್ತವಾಗಿದೆ.

**'ಕೊಂಡಿಗಳು'** ಕವಿತೆಯಲ್ಲಿ ಬದುಕನ್ನು ರೈಲು ಬಂಡಿಯ ಕೊಂಡಿಗಳಿಗೆ ಹೋಲಿಕೆ ನೀಡುತ್ತಾ ಜೀವನದಲ್ಲಿ ನಮ್ಮ ಪಾತ್ರ ಕಿರಿಯದಾದರೂ ನಾವು ನಿರ್ವಹಿಸಿ ಪಡೆಯುವ ಸಾರ್ಥಕತೆ ಹಿರಿಯದಾಗಿದ್ದರೆ ನಮಗದೇ ಹೆಮ್ಮೆ ಎಂಬುದನ್ನು ಹೇಳಿದ್ದಾರೆ.

ಇದು ಬದುಕಿನ ತಾತ್ವಿಕತೆಯನ್ನು ಹೇಳುತ್ತಿದ್ದು, ಆಗುವವರು ಆಗಲಿ ಭಾರಿ ಬೆಲೆಯ ಸರಕು ತುಂಬಿರುವ ಬಂಡಿಗಳು ಎಂಬಲ್ಲಿ ವ್ಯಂಗ್ಯತೆಯಿದೆ. ನಾವು ನಮ್ಮ ಹಿರಿಯರ-ಕಿರಿಯರ ನಡುವಿನ

ಸಂಬಂಧಗಳು ಹಳಿ ತಪ್ಪಿದಾಗ ಕೊಂಡ್ಯೊಯುವ ಕೊಂಡಿಗಳು ಎಂಬ ಧನ್ಯತಾ ಭಾವನೆಯೇ ಸಾಕು ಎಂಬ ಆಶಯವನ್ನು ವ್ಯಕ್ತಪಡಿಸಿದ್ದಾರೆ.

**'ಬದುಕು'** ಕವಿತೆಯು ಮನುಷ್ಯನ ಜೀವನವನ್ನು ಎರಡು ಹಂತಗಳಾಗಿ ವಿಭಾಗಿಸುತ್ತಾ ವಿದ್ಯಾರ್ಥಿ ಹಾಗೂ ಶಿಕ್ಷಕರನ್ನು ಸಂಕೇತಗಳನ್ನಾಗಿಸಿದ್ದಾರೆ. ಬದುಕಿನ ಪರೀಕ್ಷೆಯನ್ನು ಎದುರಿಸಿ ಸಾಧನೆಯ ಶಿಖರವೇರಲು ಹೊರಟಿರುವ ಯುವ ಜನಾಂಗಕ್ಕೆ ಕಾಲ ಯಾವುದಕ್ಕೂ ಸಾಲದು ಎಂಬುದನ್ನು–

**ಈ ವಿದ್ಯಾರ್ಥಿಗಳ ಪಾಲಿಗೋ ಕಾಲ ನಾಗಾಲೋಟದಿಂದ**<br>
**ಓಡುತ್ತಿದ್ದಾನೆ !**<br>
**ಏತಕ್ಕೂ ಸಾಲದಿವರಿಗೆ ಮೂರು ಗಂಟೆಯ ಅವಧಿ :**<br>
**ಎಷ್ಟು ಬೇಗನೆ ಸಮಯ ಸರಿದು ಹೋಗುವುದಲ್ಲ,**<br>
**ಮತ್ತಷ್ಟು ಮೆಲ್ಲನೆ ನಡೆಯಬಾರದೇ ಈ ಹಾಳು**<br>
**ಗಡಿಯಾರ–**<br>
**ಎಂದಿವರ ಕೊರಗು !**

ಎಂಬುದರ ಮೂಲಕ ಗುರಿ ಸಾಧನೆಗೆ ಕಾಲದ ಅವಶ್ಯಕತೆ ಎಷ್ಟಿದೆ ಎಂಬುದನ್ನು ಪರೀಕ್ಷೆ ಬರೆಯುತ್ತಿರುವ ವಿದ್ಯಾರ್ಥಿಯ ಮೂಲಕ ತಿಳಿಸಿದ್ದಾರೆ. ಜೀವನದ ಕೊನೆಯೇರುತ್ತಿರುವ ವ್ಯಕ್ತಿಗಳಿಗೂ ಕಾಲ ಹುಚ್ಚು ಹಿಡಿಸುತ್ತದೆ–

**ಈ ಮೂರು ಗಂಟೆಯ ಗೋಳು ಮುಗಿಯಬಾರದೆ ಬೇಗ**<br>
**ಗಡಿಯಾರವೇಕಿಷ್ಟು ನಿಧಾನ?**<br>
**ಇವರು ಉತ್ತರ ಬರೆದರೆಷ್ಟು ಬರೆಯದೆ ಹೋದರೆಷ್ಟು ;**

ಎಂಬ ತಾತ್ಸಾರ ನುಡಿಯ ಮೂಲಕ ಜೀವನದಿಂದ ಮುಕ್ತಿ ಹಂಬಲಿಸುವವರ ಬಗ್ಗೆ ಹೇಳುತ್ತಾ ಮನುಷ್ಯನ ಜೀವನದ ದ್ವಂದ್ವತೆಯ ನಿಲುವುಗಳನ್ನು ಮಾರ್ಮಿಕವಾಗಿ ಧ್ವನಿಸಲಾಗಿದೆ.

**'ನರೆ'** ಕವನದಲ್ಲಿ ಕಾಲದ ಸೆಣಸಾಟದಲ್ಲಿ ಜೀವನ ಸೋಲುವುದನ್ನು ಜನ್ಮದಿನದ ಸಂಭ್ರಮಾಚರಣೆಯಲ್ಲಿ ಸಾವು ಸಮೀಪಿಸುತ್ತಿದೆ ಎಂಬುದನ್ನು ಸಂದರ್ಭೋಚಿತವಾಗಿ ಕಟ್ಟಿಕೊಡಲಾಗಿದೆ.

ಬಾಳ ಬೆಳ್ಳಿಯ ಹಬ್ಬ ಮುಗಿಯುವುದರೊಂದಿಗೆ ಬಾಳ ಬುತ್ತಿಯ ಕೊನೆಯನ್ನು ತಲುಪುವ ಸಂಕೇತವಾಗಿ 'ನರೆ' ಕಾಣಿಸಿಕೊಂಡಾಗ ಬದುಕೇ ಮುಗಿದುಹೋಯಿತೇನೋ ಎಂದು ಯಾವುದರ ಮೇಲೂ ಒಲವಿಲ್ಲದೆ ಹಗಲು ರಾತ್ರಿಯಾಗಿ ಕೊನೆ ಎನಿಸಿ ಜೈನರಂತೆ ತಪದ ದಾರಿ ಹಿಡಿಯಲು ಒಪ್ಪದ ಮನಸ್ಸಿನ ದ್ವಂದ್ವತೆಯನ್ನು–

**ಈಗ ಕಾಡಿಲ್ಲ, ತಪ ನಮಗಲ್ಲ; ಆದರೂ**<br>
**ಏನೋ ಬೇಸರ, ಕೊರಗು, ಬದುಕಿನಾವುದೋ ಭಾಗ**<br>
**ಕಳೆದು ಹೋಯ್ತೆಂಬ ನಿರ್ವೇದ, ಭೋಗದ ಬಗೆಗೆ**<br>
**ಅರೆಮನಸಿನೊಲವು, ದೇಹದ ಗಾಡಿ ಮೊದಲಿನೊಲು**<br>
**ಹೆಮ್ಮೆಯುಕ್ಕಿಸುತ್ತಿಲ್ಲ: ಕ್ಷಣಿಕ ವೈರಾಗ್ಯ ದಿಟ.**<br>
**ಆದರೂ ಇದು ಸತ್ಯ: ಮುಪ್ಪಡಸಲಿದೆಯಿನ್ನು ;**

ಬದುಕು ಕೊನೆಯೆನಿಸುವುದು ಸಹಜ. ಗಂಗಾಧರ ಚಿತ್ತಾಲರ "ಹರಿವ ನೀರಿದು ಮರಳಿ ಮೂಲದೆಡೆಗೆ ಹರಿಯಾಲಾಗದ ನಿರತ ಏಕ ಮುಖಗಾಮಿ ಹೊಳೆ" ಎಂಬಂತೆ ಕಾಲ ನಿಲ್ಲುವುದಿಲ್ಲ. ಅದೇ ವಾಸ್ತವ, ಅದಕ್ಕೆ ಶರಣಾಗಲೇ ಬೇಕು ಎಂಬುದು ಧ್ವನಿತವಾಗಿದೆ.

'ವರ್ತಮಾನ' ಕವನ ಸಂಕಲನದ 'ವಿಮೆ' ಕವಿತೆಯು ಬದುಕಿನಲ್ಲಿ ಸಾವಿನ ಕನಸ ಕಟ್ಟಿಸಿ ಎಂದೋ ಸಾಯುವ ನಮ್ಮನ್ನು ಇಂದೇ ಕೊಲ್ಲುವ ವಿಮಾ ಪಾಲಸಿಗಳು ಮರಣಕ್ಕೆ ಮುನ್ನವೇ ನೀಡಿದ ಪ್ರಮಾಣ ಪತ್ರಗಳು ಎಂಬುದರ ಮೂಲಕ ದೇಹದ ಅನಿಶ್ಚಿತತೆಯನ್ನು ಧ್ವನಿಸುತ್ತದೆ.

**ಈ ವಿಮಾ ಸಂಸ್ಥೆಗಳನ್ನು ನೆನೆದರೆ ನನಗೆ ಮೈಯೆಲ್ಲ**
**ಉರಿಯುತ್ತದೆ!**
**'ಅಮೃತಸ್ಯ ಪುತ್ರಾ:' ಎಂದು ಕರೆದರು ಹಿಂದಿನವರು:**
**ನೀನೆ ಶಿವ, ನೀನೆ ಬ್ರಹ್ಮ ಎಂದು ನಂಬುಗೆ ಕೊಟ್ಟರು.**
**ಈ ಪಾಪಿಗಳು ಬಂದು "ನೀನು ಹುಲು ಮನುಜನಯ್ಯಾ,**
**ಯಾವ ಗಳಿಗೆಯಲ್ಲಾದರೂ ಸಾಯಬಹುದು. ನಿನ್ನ ಹೆಂಡತಿ**
**ಮಕ್ಕಳಿಗೆ ಗತಿಯೇನು? ವಿಮೆ ಮಾಡಿಸು. ಕಂತು ಕಟ್ಟು"**
**ಎಂದು ನನ್ನ ಅಮೃತತ್ವದ ಬುಡಕ್ಕೆ ಕೊಡಲಿ ಪೆಟ್ಟು**
**ಹಾಕುತ್ತಾರೆ!**

ನೂರು ವರುಷ ಬದುಕ ಬಲ್ಲೆ ಎಂಬ ಅಮೃತ ಸಿಂಚನ ನೀಡಬೇಕಾದ ಇವರನ್ನು ಸಾವಿನ ಭಯ ತುಂಬುವ ಯಮ ಕಿಂಕರರಾಗಿ ಕಾಣಿಸುವ ಮೂಲಕ ಬದುಕಿನ ಅನಿಶ್ಚತತೆಯನ್ನು ಕಟ್ಟಿಕೊಟ್ಟಿದ್ದಾರೆ.

'ಐಕ್ಯ' ಕವನವು ಪ್ರಕೃತಿ ಮತ್ತು ಮನುಷ್ಯನ ಸಂಬಂಧವನ್ನು ಹೇಳುತ್ತಾ, ಲೋಕದಲ್ಲಿ ಹುಟ್ಟಿದ ನಾವು ಬದಲಾಗುತ್ತೇವೆ, ಬಯಲಾಗುತ್ತೇವೆ ಆದರೆ ಪ್ರಕೃತಿಯು ನಿತ್ಯ ನೂತನವಾಗಿ ಉಳಿಯುತ್ತದೆ ಎಂಬುದನ್ನು ಹೀಗೆ ಹೇಳುವ ಪ್ರಯತ್ನ ಮಾಡಿದ್ದಾರೆ.

**ಆಕಾಶ ಇಷ್ಟೇ ನೀಲಿಯಾಗಿರುತ್ತದೆ**
**ಮರ ಗಿಡಗಳು ಇಷ್ಟೇ ಹಸಿರಾಗಿರುತ್ತವೆ,**
**ಹಕ್ಕಿಗಳ ಕೊರಳು ಇಷ್ಟೇ ಇಂಪಾಗಿರುತ್ತದೆ,**
**ಸಕ್ಕರೆ ಇಷ್ಟೇ ಸವಿಯಾಗಿರುತ್ತದೆ,**
**ಉಪ್ಪು ಇಷ್ಟೇ ರುಚಿಯಾಗಿರುತ್ತದೆ**
**ಹುಡುಗಿಯರು ಇಷ್ಟೇ ಚೆಲುವೆಯರಾಗಿರುತ್ತಾರೆ......**
**ಇತ್ಯಾದಿ**
**ಒಂದು ದಿನ ನಾನು ಇಲ್ಲವಾಗುತ್ತೇನೆ; ಲೋಕ**
**ನನ್ನ ಪಾಲಿಗೆ ಇಲ್ಲವಾಗುತ್ತದೆ !**

ಎಂಬ ನಿರಾಸೆಯನ್ನು ವ್ಯಕ್ತಪಡಿಸಿದ ಕವಿ, ಅದನ್ನು ಸಹಿಸದೆ

**ಅಲ್ಲ, ಹಾಗಲ್ಲ–**
**ಈ ಲೋಕದಲ್ಲಿ ಒಂದಾಗಿ ಮುಂದುವರೆಯುತ್ತೇನೆ :**
**ಸಹಸ್ರ ಶೀರ್ಷ ಸಹಸ್ರಾಕ್ಷ ಸಹಸ್ರಪಾದನಾಗಿ !**

ಎಂದು ಹೇಳುವುದರ ಮೂಲಕ ಪ್ರಕೃತಿಯ ಯಾವುದೋ ಅಂಶವಾಗಿ ಅದರಲ್ಲಿ ಲೀನವಾಗ ಬಯಸಿರುವುದನ್ನು ಕಾಣಬಹುದು.

**'ಎಂಜಲು'** ಕವಿತೆಯು ಮನುಷ್ಯನ ಮನಸ್ಸಿನಲ್ಲಿ ಹುಟ್ಟುವ ಭಾವನೆಗಳಿಗೆ ಅವರ ನೋಟವೇ ಮುಖ್ಯವಾಗುತ್ತದೆ ಎಂಬುದನ್ನು ಹೀಗೆ ಹೇಳಿದ್ದಾರೆ.

**ಈ ಲಾವಣ್ಯವತಿಯನ್ನು ಕಂಡಾಗ ಒಮ್ಮೊಮ್ಮೆ**
**ಜುಗುಪ್ಸೆಯಾಗುತ್ತದೆ. ನನಗೆ :**
**ಎಷ್ಟೊಂದು ಕಣ್ಣು ನೆಕ್ಕಿದೆಂಜಲೋ ಈ ಇವಳ**
**ಮೈ ಸೊಬಗು !**

ಇಲ್ಲ ಅದು ಹಾಗಲ್ಲ ಎಂದುಕೊಂಡ ಕವಿ ಹೀಗೆ ಹೇಳುತ್ತಾರೆ,

**ಕ್ರಮೇಣ ಹೊಳೆಯುತ್ತದೆ ಸತ್ಯ :**
**ಬೆಚ್ಚುತ್ತೇನೆ :**
**ಅಯ್ಯಯ್ಯೋ, ಎಂಜಲಾದದ್ದು ಈ ಹೆಣ್ಣಲ್ಲ,**
**ನಾನು,**
**ನಾನು !**

**'ವರ್ತಮಾನ'** ಕವನವು ಮನುಷ್ಯನ ಇಂದಿನ ಜೀವನದ ನೋಟವನ್ನು ಒದಗಿಸಿಕೊಟ್ಟಿದೆ. ಬದುಕಿನ ವಿಶೇಷತೆ ಏನು ಎಂದಾಗ ಉದರಕ್ಕಾಗಿ ಹೋರಾಟ ಎಂಬ ಉತ್ತರ ದೊರೆಯುತ್ತದೆ, ಆದರೆ ಇಷ್ಟೆಯೇ ಬದುಕು, ಇಲ್ಲ ಮುಂದುವರಿದಿದ್ದೇವೆ–

**ಕಂಡ ಕಂಡ ಕಾಮನ ಬಿಲ್ಲಿಗೆ ಬಾಣವಾಗಲೆ ಎಂದು**
**ಬಾಣಲೆಯಲ್ಲಿ ಕುದಿ ಕುದಿದು,**
**ಆ ಉರಿಯನ್ನೇ ಹಾಸಾಗಿ ಹೊಕ್ಕಾಗಿ ಬಳಸುತ್ತ,**
**ಅದನ್ನೆ ಅಷ್ಟಿಷ್ಟು ಕಾವ್ಯ ಮಾಡುತ್ತ**
**ನಾವು ಬದುಕಿದ್ದೇವೆ !**
**ಪಾಂಡುವಿಗೆ ಮುನಿಯಿತ್ತ ಶಾಪ ಬಳುವಳಿಯಾಗಿ ಬಂದು,**
**ನಮ್ಮ ಹೆಂಡಿರ ಎದೆಯ ಮೇಲೊರಗಿ ಸಾಯುತ್ತ**
**ಮತ್ತೆ ಹುಟ್ಟುತ್ತ**
**ಅಂತೂ ನಾವು ಬದುಕಿದ್ದೇವೆ !**
**ಇಷ್ಟೇ ಸ್ವಾಮಿ, ವಿಶೇಷ.**

ಇಲ್ಲಿ ಬದುಕಿನ ನಾಶ ಅಥವಾ ಸಾವು ಖಚಿತ ಎಂದು ತಿಳಿದೂ ಮನುಷ್ಯ ಸುಖಕ್ಕಾಗಿ ಎಳಸುತ್ತಾ ಇಷ್ಟೇ ಬದುಕು ಎಂದು ಕೈ ಕಟ್ಟಿ ಕುಳಿತ 'ಸೋಮಾರಿ' ಮನುಷ್ಯರನ್ನು ಕುರಿತು ಹೇಳಿದ್ದಾರೆ.

**'ಬೊಗಸೆ'** ಕವನ ಸಂಕಲನದ **'ಆಹ್ವಾನ'** ಕವಿತೆಯಲ್ಲಿ ಸಾವಿನ ಕರೆ ಬಂದಾಗ ಅಡಗಿ ಕುಳಿತುಕೊಳ್ಳುವ ಮನುಷ್ಯಧರ್ಮಕ್ಕೆ ವಿರುದ್ಧವಾಗಿ ಅದರ ಕುತಂತ್ರವನ್ನು ಖಂಡಿಸುತ್ತಾ ಸಾವನ್ನೇ ನೇರವಾಗಿ ಆಹ್ವಾನಿಸುವ ಬಗೆ ಸಿ.ಪಿ.ಕೆಯವರ ದಿಟ್ಟತನದ ಪ್ರತೀಕವಾಗಿದೆ.

ಸಾವು ನಿಶ್ಚಿತ ಮತ್ತು ಅಕಾಲಿಕ. ಅದು ಹೇಳಿಕೇಳಿ ಬರುವುದಿಲ್ಲ, ಅದನ್ನು ಕವಿ ಹೀಗೆ ಹೇಳಿದ್ದಾರೆ.

**ಓ ಮೃತ್ಯು–**
**ಪ್ರತಿನಿತ್ಯ ವೃತ್ತಪತ್ರಿಕೆಯನ್ನೋದುವಾಗೆಲ್ಲ ನಿನ್ನ**
**ಹೀನ ವರ್ತನೆ ಕಂಡು ಜುಗುಪ್ಸೆಯಾಗುತ್ತದೆ ನನಗೆ.**
**ಧಿಕ್ಕಾರ ನಿನಗೆ**
**ಪುರುಷನಲ್ಲ ನೀನು: ಹೇಡಿ ನಪುಂಸಕ;**
**ಎದುರಿಗೆ ಬರುವ ಧೈರ್ಯವಿಲ್ಲದೇ ಮರೆಯಲ್ಲಿ ನಿಂತು**
**ಅನಿರೀಕ್ಷಿತವಾಗಿ ಘಾತಿಸುವ ಪಾತಕಿ !**

ಎಂದು ನಿಂದಿಸುತ್ತಾ ಸಾವನ್ನು ಗೆಲ್ಲುವ ಹುಂಬತನದಿಂದಲೇ ನೇರವಾಗಿ ಹೋರಾಟಕ್ಕೆ ಆಹ್ವಾನ ನೀಡುತ್ತಾ ಸೋಲಿನ ಅನಿವಾರ್ಯತೆಯನ್ನು ಹೇಳಿರುವುದು ವಾಸ್ತವ ಸತ್ಯವಾಗಿದೆ.

**ನನಗೆ ಗೊತ್ತು: ನಾನು ಸೋಲುವುದು ಖಂಡಿತ.**
**ಆದರೆ ವೀರರೊಡನೆ ವೀರೋಚಿತ ರೀತಿಯಲ್ಲಿ**
**ಸೆಣಸಿ, ಸೋಲುವುದು ಕೂಡ ಗೆಲುವು:**
**ನಿನ್ನಂತೆ ಗೆರಿಲ್ಲಾ ತಂತ್ರಗಳಿಂದ ಗೆದ್ದರೂ**
**ಅದು ಸೋಲು ! –**

ಎಂಬ ಸಾಲುಗಳು ಜೀವನ ಯುದ್ಧಕ್ಕೆ ಸೂಕ್ತವಾಗಿ ಅನ್ವಯಿಸುವಂತಿವೆ.

"ಬಂಧುಗಳಯ್ಯ ನಾವು, ವೈರವೇತಕ್ಕೆ ನಮ್ಮಲ್ಲಿ" ಎಂಬ ಸಾಲು ಸೋಲು ಖಚಿತ ಎಂದು ಭಾವಿಸಿದ ಸಂದರ್ಭದಲ್ಲಿ ಅದರೊಂದಿಗೆ ರಾಜಿಯಾಗುವುದೇ ಸೂಕ್ತ ಎಂದು ತನತನವನ್ನು ಬದಿಗಿರಿಸಿ ಹೋರಾಡುವ ಮನುಷ್ಯನ ಮನೋವೃತ್ತಿಗೆ ನಿದರ್ಶನವಾಗಿದೆ. ಕೊನೆಗೆ–

**ಮೂರ್ಖ, ನೀನು ಅಜೇಯನೆಂದು ತಿಳಿದಿದ್ದೀಯಾ?**
**ಬಾ, ನೀನು ಹೇಗೆ ಬಂದರೆ ತಾನೆ ಏನು?**
**'ಸತ್ತರೇಂ ಪುಟ್ಟರೇ'?**
**ಆ ಮೃತ್ಯುಂಜಯನ ಶಿಷ್ಯರಯ್ಯ ನಾವು:**
**ನಮಗೆ ಎಲ್ಲಿಯ ಸಾವು?**

ಎಂಬುದು ಹುಟ್ಟು–ಸಾವಿನ ನಿರಂತರತೆಯನ್ನು ಧ್ವನಿಸುತ್ತದೆ.

**'ರಾಜಿ'** ಕವನವು ಸತ್ಯವನ್ನೇ ಸುಳ್ಳಾಗಿಸಿ, ಸುಳ್ಳನ್ನೇ ಸತ್ಯವಾಗಿಸುವ ಸಮಾಜದ ನಗ್ನ ಸತ್ಯವನ್ನು ಅನಾವರಣಗೊಳಿಸಿದೆ. ಇಂದು ಕಳ್ಳರು, ಸುಳ್ಳರು, ಕೃತಘ್ನರೆ ತುಂಬಿರುವ ಸಮಾಜದಲ್ಲಿ ಇಷ್ಟವಿಲ್ಲದಿದ್ದರು ಬದುಕುವುದು ಅನಿವಾರ್ಯತೆ ಎಂಬುದನ್ನು ಹೀಗೆ ಹೇಳುತ್ತದೆ.

ಬೇರೆ ಏನಿದೆ ದಾರಿ? ಪ್ರಾಮಾಣಿಕನಾಗಿ
ಸತ್ಯವನ್ನು ಒದರುತ್ತ ಹೊರದುತ್ತೇನೆಂದರೆ
ಪ್ರತಿನಿತ್ಯ ಒಬ್ಬೊಬ್ಬರೊಡನೆ ಜಗಳವಾಡಬೇಕು
ಎಲ್ಲರ ಸಂಗ ಬಿಟ್ಟು ಒಂಟಿಯಾಗಿರಬೇಕು
ಕೆಟ್ಟವನು ಅಥವಾ ಹುಚ್ಚ ಎನಿಸಿಕೊಳ್ಳಬೇಕು
ಸಂನ್ಯಾಸಿಯಾಗಿ ಕಾಡಿಗೆ ಹೋಗಬೇಕು
ಕಡೆಯ ಪಕ್ಷ, ಆತ್ಮಹತ್ಯೆ ಮಾಡಿಕೊಳ್ಳಬೇಕು
ಅದೆಲ್ಲ ಸಾಧ್ಯವಿಲ್ಲ. ಎಂತಲೇ
ಹೊಂದಿಕೊಂಡು ಬದುಕಬೇಕು. –

ಹೀಗೆ ಇದೇ ಬದುಕು, ರಾಜಿಯೇ ಅದರ ಸೂತ್ರ, ಇಲ್ಲವೇ ಅದು ಸೂತ್ರ ಹರಿದ ಗಾಳಿಪಟ ಎಂದು ಹೇಳುತ್ತಾ ಅನ್ಯಾಯ, ಅಪ್ರಾಮಾಣಿಕತೆಯೇ ಸಮಾಜದಲ್ಲಿ ಮೇಲುಗೈ ಸಾಧಿಸಿರುವುದನ್ನು ವಿರೋಧಿಸುತ್ತಲೆ ಅದನ್ನು ಒಪ್ಪಿಕೊಳ್ಳಲೇಬೇಕಾದ ಅಸಹಾಯಕತೆಯನ್ನು ವ್ಯಕ್ತಪಡಿಸಿದ್ದಾರೆ.

**'ಆಸ್ಪತ್ರೆ'** ಕವನದಲ್ಲಿ ಬದುಕನ್ನು ಆಸ್ಪತ್ರೆಗೆ ಹೋಲಿಸುತ್ತಾ ಇಲ್ಲಿ ಹುಟ್ಟು ಸಾವಿನ ನಡುವಿನ ಜೀವನದಲ್ಲಿ ಉಂಟಾಗುವ ಸಂದಿಗ್ಧತೆನ್ನು ಅನಾವರಣಗೊಳಿಸಿ ಅದನ್ನು ಹೀಗೆ ಹೇಳುವ ಪ್ರಯತ್ನ ಮಾಡಿದ್ದಾರೆ.

ಒಂದು ಕಡೆ ಜನನ, ಮತ್ತೊಂದು ಕಡೆ ಮರಣ,
ನಡುವೆ ನೋವು :
ಒಂದಲ್ಲ ಹಲವು: ಹಾವು !
ಒಂದು ಕಡೆ ಜೀವ ನರಳಿ ಹೊರಳಿದರೆ ಇನ್ನೊಂದು ಕಡೆ
ಅರಳುತ್ತದೆ :
ಒಂದು ಕಡೆ ಹೂವು ನಲುಗಿ ಉದುರಿದರೆ ಇನ್ನೊಂದು ಕಡೆ
ಪಕಳೆಗೆದರಿ ಕಳೆ ಬೀರುತ್ತದೆ !
ಸಾವು ನೋವುಗಳ ಮುಂದೆಯೆ ನಡುವೆಯ
ಅಣಕಿಸಿ ನಗುತ್ತದೆ ಬದುಕು :



ಎಂದು ಹೇಳುತ್ತಲೇ ಇದೊಂದು ಗುಟ್ಟು, ಬಿಡಿಸಲಾರದ ಕಗ್ಗಂಟು ಸ್ವರ್ಗ–ನರಕಗಳು ಎಂಬುವು ಬೇರೆ ಎಲ್ಲೋ ಇಲ್ಲ, ಇಲ್ಲಿಯೇ ಆಸ್ಪತ್ರೆಯಲ್ಲಿ ಕಾಣಬಹುದು ಎನ್ನುವುದರ ಮೂಲಕ ಅದನ್ನು ಬದುಕಿಗೆ ಹೋಲಿಸಿರುವುದು ವಾಸ್ತವತೆಗೆ ಹಿಡಿದ ಕೈಗನ್ನಡಿ ಎನ್ನಬಹುದಾಗಿದೆ.

**'ಕನವರಿಕೆ'** ಕವನ ಸಂಕಲನದ 'ನೀಲಾಂಜನೆ(ನ)' ಕವನವು ಬದುಕು ಶಾಶ್ವತವಲ್ಲ ಅದು ಯಾವಾಗ ಬೇಕಾದರು ಕೊನೆಯಾಗಬಹುದು ಎಂಬುದನ್ನು ಇಲ್ಲಿ ಹೇಳುವ ಪ್ರಯತ್ನ ಮಾಡಿದ್ದಾರೆ.

ಇಂದ್ರಸ್ಥಾನದಲ್ಲಿ ಇಂದ್ರಿಯನಿರಸನವಾದ ಹಾಗೆ
ಕುಣಿ ಕುಣಿಯುತ್ತಲೆ ಕರಗಿ ಕಣ್ಮರೆಯಾಗುತ್ತಾಳೆ
ಆ ದೇವಾಂಗನೆ,
ನೀಲಾಂಜನೆ ! –

ಹೀಗೆ ದೇವ ಕನ್ಯೆಯಾದ ನೀಲಾಂಜನೆಗೆ ಸಾವು ಘಟಿಸುತ್ತದೆ ಎಂದ ಮೇಲೆ ಸಾಮಾನ್ಯರ ಗತಿ ಏನು ಎಂದು ಪ್ರಶ್ನೆ ಮಾಡುತ್ತಲೇ, ಪುರುದೇವನಿಗೆ ಅರಿವಾಗಿದ್ದು, ಇವರಿಗೆ ಏಕೆ ಅರಿವಾಗುವುದಿಲ್ಲ ಎಲ್ಲದಕ್ಕೂ ಕೊನೆಯಿದೆ ಎಂದು – ಎಂಬುದನ್ನು

**ಆ:! ಇಂಥ ದಿವ್ಯ ಲಾವಣ್ಯಕ್ಕೂ ಮೃತ್ಯುಶೀತಲ ಹಸ್ತದ**
**ಸೋಂಕೆ?**
**ಇಂಥ ಸ್ವರ್ಗೀಯ ಕಲೆಗೂ ಕೊನೆಯೇ? ಸಿರಿ ಚಿರವೆ?**
**ಹರಯ? ಹರಿಯುತ್ತದೆ ಶಂಕೆ!**
**ಇರವಿನ ಕಣಕಣದಲ್ಲೂ ಸ್ಪಂಧಿಸುತ್ತದೆ ಸಮ್ಯಕ್ತ್ವ:**
**ಕೈ ಬೀಸಿ ಕರೆಯುತ್ತದೆ ಸಮವಸರಣ;**

ಎಂಬುವುದರ ಮೂಲಕ ಸಾವು ಖಚಿತವಾದುದ್ದು, ಅದನ್ನು ಅರಿತರೆ ಅತಿಮಾನುಷ ವ್ಯಕ್ತಿಯಾಗುತ್ತಾನೆ ಇಲ್ಲವೇ ಸಾಮಾನ್ಯ ಮನುಷ್ಯನಾಗಿ ಉಳಿಯುತ್ತಾನೆ ಎಂಬುದನ್ನು ಕಾಣಬಹುದು.

ಸಿ.ಪಿ.ಕೆ ಅವರ ಕವನಗಳಲ್ಲಿ ಜೀವನ ತತ್ವ ಅಧ್ಯಾತ್ಮಗಳಿಗೆ ಸಂಬಂಧಪಟ್ಟ ವಿಚಾರಗಳನ್ನು ಪ್ರಸ್ತುತ ಬದುಕಿಗೆ ಅನ್ವಯಿಸುವ ನಿಟ್ಟಿನಲ್ಲಿ ಕಟ್ಟಿಕೊಟ್ಟಿದ್ದಾರೆ. ಜೀವನ ದೊಡ್ಡದು, ಸಂದಿಗ್ಧ, ಸಂಕೀರ್ಣ, ಅದು ಜಂಜಾಟದಿಂದ ಕೂಡಿರುವಂತದ್ದು ಎಂಬ ಅಂಶಗಳನ್ನು ತಿಳಿಸಿದ್ದಾರೆ. ಜೊತೆಗೆ ಜೀವನದ ದ್ವಂದ್ವ, ನಿರಾಸೆ, ದುಃಖ, ನೋವು, ಗೊಂದಲ, ತಿರಸ್ಕಾರ, ಪ್ರೀತಿ, ಮೆಚ್ಚುಗೆ, ಟೀಕೆ, ಖಂಡನೆ, ವ್ಯಂಗ್ಯ, ಎಲ್ಲವನ್ನು ಕಾಣಬಹುದಾಗಿದೆ, ಸ್ವಾರ್ಥ ದುರಾಸೆಗೆ ಒಳಗಾದ ಮನುಷ್ಯ ಜೀವನದ ಅರ್ಥ ತಿಳಿಯದೆ ಬದುಕುತ್ತಿದ್ದಾನೆ. ಅದನ್ನು ಬಿಟ್ಟು ಪರರಿಗೆ ನೆರವಾಗಿ, ತಾನು ಅರ್ಥ ಪಡೆದುಕೊಂಡು ಸಿಕ್ಕಿರುವ ಜೀವನವನ್ನು ಸಾರ್ಥಕಗೊಳಿಸಿಕೊಳ್ಳಬೇಕೆಂಬ ತತ್ವಗಳು ಅನಾವರಣಗೊಂಡಿರುವುದನ್ನು ಮೇಲಿನ ಭಾಗದಲ್ಲಿ ಕಾಣಬಹುದಾಗಿದೆ.

### *೪.೩. ಸಾಮಾಜಿಕ ಕವಿತೆಗಳು :*

ಪ್ರಕೃತಿ ಮನುಷ್ಯನ ಸಂಬಂಧದಂತೆಯೇ ಸಮಾಜ ವ್ಯಕ್ತಿಯ ನಡುವಿನ ಸಂಬಂಧ ಅವಿನಾಭಾವವಾದುದ್ದು. ಹಾಗಾಗಿ ಸಮಾಜದಲ್ಲಿ ಬದುಕು ಸವೆಸುತ್ತಿರುವ ಮನುಷ್ಯ ಸಮಾಜಕ್ಕೆ ಕಂಟಕವಾಗದೆ ಆದರ್ಶವಾಗಬೇಕೆಂದು ತಿಳಿಸಿದ್ದಾರೆ. ಸ್ವಾರ್ಥ ಮುಖವಾಡ ಧರಿಸಿದ ಭ್ರಷ್ಟ ರಾಜಕಾರಣಿಗಳ ಭಸ್ಮಾಸುರತನದಿಂದಾಗಿ ಸಮಾಜಕ್ಕಾಗುತ್ತಿರುವ ಅನ್ಯಾಯವನ್ನು ಖಂಡಿಸಿದ್ದಾರೆ. ಮನುಷ್ಯ ಪ್ರಯೋಜನಕ್ಕೆ ಬಾರದ ಹಸಿ ಸೌದೆಯಾಗದೆ ಉರಿಯುವ ಕಟ್ಟಿಗೆಯಾಗಬೇಕು. ಸಮಾಜದಲ್ಲಿ ನಿಕೃಷ್ಟ ಎಂದು ಯಾವುದನ್ನೂ ಪರಿಗಣಿಸಬಾರದು ಸಮಾಜಕ್ಕೆ ಎಷ್ಟು ಕೊಟ್ಟರು ಎನ್ನುವುದಕ್ಕಿಂತ ಏನು ಕೊಟ್ಟರು ಎಂಬುದು ಮುಖ್ಯ. ಮನುಷ್ಯನ ಸ್ವಾರ್ಥ ಲೋಭ ದುರಾಸೆಗಳಿಂದ ಸಮಾಜ ಹೇಗೆ ವಿಷಮ ಸ್ಥಿತಿಯನ್ನು ತಲುಪುತ್ತಿದೆ ಎಂಬ ವಿಷಾದ ಇದೆ. ಹೀಗೆ ಯುವ ಜನತೆ ತಿಳಿಯಬೇಕಾದ ಕಿವಿ ಮಾತುಗಳು ಇವರ ಕಾವ್ಯಗಳಲ್ಲಿವೆ. ಎಂಬುದನ್ನು ಪ್ರಸ್ತುತ ಭಾಗದಲ್ಲಿ ಅನಾವರಣಗೊಳಿಸಲಾಗಿದೆ.

**'ತಾರಸಖ'** ಕವನ ಸಂಕಲನದ **'ಒಳದನಿ'** ಕವನವು ಬದುಕಿನ ಸಂಕೀರ್ಣತೆಯನ್ನು ಕಟ್ಟಿಕೊಡುತ್ತದೆ **'ಸೌದೆ'** ಇಲ್ಲಿ ಸಾಂಕೇತಿಕ ವಸ್ತುವಾಗಿದೆ ಉರಿದುರಿದು ಅಗ್ನಿ ಉಗುಳಿ ಅಡಿಗೆಗೆ ನೆರವಾಗಬೇಕಾಗಿದ್ದ ಸೌದೆ ಹೊಗೆಯುಗುಳಿ ಮನೆಯವರ ಶಾಪಕ್ಕೆ ಗುರಿಯಾಗುತ್ತಿದೆ.

**ಎಂದಾದರೂ ಉರಿದು ಬೂದಿಯಾಗಲೇಬೇಕು :**
**ಹಮ್ಮು ಬಿಮ್ಮನು ಬಡು, ವಿನೀತವಾಗು**
**ಈ ಶಠತನದಲಾವ ವಿಕಟಸಂತಸ ನಿನಗೆ ?**
**ಅಜ್ಞಾನವನು ತೊರೆದು ಅರಿವ ಗಳಿಸು !**

ಸಮಾಜದ ನಾಲ್ಕು ಜನರ ಬಾಯಲ್ಲಿ ಸರಿ ಎನಿಸಿಕೊಳ್ಳುವಂಥ ಬದುಕ ಕಳೆಯಬೇಕು. ಮೇಲಿನ ಸಾಲುಗಳು ಮನುಷ್ಯನ ನಾನತ್ವ, ಅಹಂಕಾರ ಮತ್ತು ಮೂರ್ಖತನದ ದಟ್ಟ ಚಿತ್ರಣ ಕಟ್ಟಿಕೊಡುತ್ತವೆ.

**ಹೊಗೆಯನುಗುಳುವ ಬದಲು ಉರಿದುರಿದು ಕಿಡಿಕಾರು,**
**ಅಗ್ನಿದೇವನ ಕೈಯ ಕೈದುವಾಗು !**
**ಅಡಿಗೆಯಾಗುವುದಾಗ; ಉಂಡವರು ನಾಲ್ಕು ಜನ**
**'ತೃಪ್ತೋಸ್ಮಿ' ಎನ್ನುವರು: ಪುಣ್ಯ ನಿನಗೆ !**

ಸ್ವಾರ್ಥ ಮತ್ತು ಕೆಟ್ಟತನವನ್ನು ತೊರೆದು ಸಮಾಜದ ಉದ್ಧಾರಕ್ಕಾಗಿ ಬದುಕು ಕಟ್ಟಿಕೊಳ್ಳಬೇಕೆಂಬ ಆಶಯ ಈ ಕವನದಲ್ಲಿ ಮೂಡಿ ಬಂದಿದೆ.

ಸಿ.ಪಿ.ಕೆ. ಅವರ ಬರವಣಿಗೆ ವಿಶಿಷ್ಟವಾದುದು ಪ್ರಕೃತಿಯ ಜಡ-ಚೈತನ್ಯ, ನೈಸರ್ಗಿಕ-ಕೃತಕ ಎಲ್ಲವನ್ನು ತಮ್ಮ ಕಾವ್ಯದ ವಸ್ತುವನ್ನಾಗಿಸಿಕೊಂಡಿರುವ ಅವರ ನೋಟ ವಿನೂತನ **'ತಾರಾಸಖ'** ಕವನ ಸಂಕಲನದ **'ದೀಪಧಾರಿ'** ಕವನದಲ್ಲಿ 'ದೀಪದ ಕಂಬ' ಉತ್ತಮ ಪ್ರತಿಮೆಯಾಗಿ ಮೂಡಿದೆ.

ಕೊಳೆ ಚರಂಡಿಯ ಬದಿಗೆ ಕೆಸರಿನಲ್ಲಿ ಬೇರೂರಿ ಮುಡಿಯ ತುಂಬ ದೀಪಗಳನ್ನು ಧರಿಸಿ ಪ್ರಭೆಯುಸಿರ ಚಾಚುತ್ತಿರುವ ದೃಶ್ಯ ಮನೋಜ್ಞವಾಗಿದೆ. ಜಾಹಿರಾತುಗಳನ್ನು ಹೊತ್ತು ತುಂಟ ಹುಡುಗರ ಆಟಕ್ಕೆ ವಸ್ತು ಕೂಡ ಆಗಿದೆ. ಆದರೆ ಇದಾವುದರ ಪರಿವೆಯೂ ಇಲ್ಲದೆ ತನ್ನ ಕರ್ತವ್ಯ ನಿರ್ವಹಣೆಯಲ್ಲಿ ತೊಡಗಿ ನಿಶ್ಚಲವಾಗಿ ನಿಂತಿರುವ ದೀಪದ ಕಂಬ ಸಮಾಜದ ಒಂದು ಅಂಗವಾಗಿದ್ದು ಉಪಯೋಗಕರವೂ ಆಗಿದೆ.

**ಎಲ್ಲಿಂದಲೋ ಬಂದು ತಲೆಯ ಮೇಗಡೆ ಹಾಯ್ದ**
**ತಂತಿಯಿಂದಿದು ಮಿಂಚ ಸ್ವೀಕರಿಸಿದೆ :**
**ಬಯಲಿಗದ ಬೆಳಕಾಗಿ ನೋಂಪಿಯನೆ ನೋಂತು**
**ಹಾರೈಸಿ ಹರಸುತ್ತಿದೆ :**
**ಸರ್ವೇ ಜನಾಸ್ಸುಖಿನೋ ಭವಂತು !**

ಹೀಗೆ ಯೋಗಿಯ ರೀತಿಯಲ್ಲಿ ತಪಸ್ಸಿನಲ್ಲಿ ತಲ್ಲೀನವಾಗಿರುವ ಇದನ್ನು ಬ್ರಹ್ಮದಂಡ ಎಂದು ಕರೆದಿದ್ದು ಸರ್ವಜನರಿಗೂ ಬೆಳಕು ನೀಡುತ್ತಿರುವ ದೀಪದ ಕಂಬದ ಮಹತ್ವವನ್ನು ಈ ಕವಿತೆಯಲ್ಲಿ ಚಿತ್ರಿಸಿದ್ದಾರೆ.

**'ಬೀಳ್ಕೊಡುಗೆ'** ಕವನದಲ್ಲಿ ಕವಿ ಮುಳುಗುವ ಸೂರ್ಯನನ್ನು ನವೀನ ದೃಷ್ಟಿಕೋನದಿಂದ ನೋಡಿದ್ದಾರೆ. ಕೆಲಸ ಪ್ರಾರಂಭಿಸಿದ ದಿನದಿಂದ ನಿವೃತ್ತಿಯಾಗುವವರೆಗೂ ದುಡಿದ ಅಧಿಕಾರಿಗಳನ್ನು ಬೀಳ್ಕೊಡುವುದು ವಾಡಿಕೆ. ಅದೇ ರೀತಿ ಕವಿ ಸೂರ್ಯನನ್ನು ಬೀಳ್ಕೊಡುತ್ತಿರುವ ಕಲ್ಪನೆ

ಅಪೂರ್ವವಾಗಿದ್ದು, ಅವನನ್ನು ನಿವೃತ್ತ ಅಧಿಕಾರಿಗೆ ಹೋಲಿಸಿರುವುದು ವಾಸ್ತವ ಸಮಾಜದ ಜನರ ಮನೋವೃತ್ತಿಗೆ ಒಪ್ಪುವಂತಿದೆ.

**ಚೆಲುವಿನಧಿಕಾರವನು ಸಂಜೆಗೊಪ್ಪಿಸಿದ ರವಿ**
**ಈಗ ನಿವೃತ್ತ ;**

ಹೀಗೆ ಸೂರ್ಯ ನಿವೃತ್ತಿಯಾದ ಕೂಡಲೇ ಸಂಜೆಯ ಪ್ರಭುತ್ವ ಪ್ರಾರಂಭವಾಯಿತು. ಪಡುವಣದ ಸಂಜೆಯ ಕೆಂಪನ್ನು ಕಂಡು ಆಫೀಸ ಬೀಳ್ಕೊಂಡ ದುಗುಡದಲಿ ವೃದ್ಧ ಅತ್ತನೋ ಏನೋ ಎಂದಿರುವುದು ಆತನ ಪ್ರೀತಿಯನ್ನು ತಿಳಿಸುವಂತಿದೆ. ಆದರೆ ಆತನನ್ನು ಕಣ್ಣೆತ್ತಿ ನೋಡುವವರೇ ಇಲ್ಲ. ಅವನ ಸೇವೆಯ ನೆನಪೂ ಸಹ ಇಲ್ಲದೆ ಎಲ್ಲರೂ ಸಂಜೆಯನ್ನು ಆರಾಧಿಸುತ್ತಿದ್ದಾರೆ. ಸಂಜೆಯ ಬಣ್ಣದೋಕುಳಿ, ನಭೋವಾಣಿ, ವಾಯುವಿಹಾರ, ಎಲ್ಲದರೊಂದಿಗೆ ಸಂಜೆಯ ಆಡಳಿತ ಆರಂಭವಾಯಿತು. ಹಕ್ಕಿಗಳ ಮೇಳ ಸೂರ್ಯನಿಗೆ ಚರಮ ಗೀತೆ ಹಾಡುವಂತಿದೆ. ಲೋಕದ ಇಂಥ ನಡತೆಯ ಬಗ್ಗೆ ವಿಷಾದ ವ್ಯಕ್ತ ಪಡಿಸಿದ್ದಾರೆ. ಮರಣ ಶಯ್ಯೆಯಲಿ ಮಲಗಿರುವ ದಿನಪನನ್ನು ಕಂಡು ಕನಿಕರ ವ್ಯಕ್ತ ಪಡಿಸುತ್ತಾರೆ.

**ಲೋಕದ ಕೃತಘ್ನತೆಗೆ ಮುನಿದು ನೀ ಶಪಿಸದಿರು,**
**ಕ್ಷಮಿಸಿಬಿಡು ಪ್ರಿಯಬಂಧು, ಹೋಗಿಬಾರ**
**ಕ್ರೂರಿಯಂತಿದ್ದರೂ ಆಪ್ತ ನೀನಾಗಿದ್ದೆ ;**
**ಸ್ವಲ್ಪವೇ ನಿನ್ನ ಉಪಕಾರ ?**

ಮಹದುಪಕಾರ ಮಾಡಿದ ನಿನ್ನನ್ನು ಮರೆತ ಕೃತಘ್ನರನ್ನು ಶಪಿಸದಿರು, ಕ್ಷಮಿಸಿಬಿಡು 'ಪ್ರಿಯಬಂಧು' ಎಂದು ಕೋರಿ ಕವಿ ಸೂರ್ಯನನ್ನು ಬೀಳ್ಕೊಟ್ಟಿದ್ದಾರೆ. ಇಲ್ಲಿ ಸೂರ್ಯ ಅಧಿಕಾರಿಯ ಪ್ರತೀಕ, ಅಧಿಕಾರಿ ಸೇವೆ ಸಲ್ಲಿಸಿ ಕೈಲಾಗದ ಸಮಯದಲ್ಲಿ ನಿವೃತ್ತಿ ಹೊಂದಿದಾಗ ಆತನನ್ನು ಕಡೆಗಣಿಸುವ ಜನರ ನಡತೆಯನ್ನು ನಯವಾಗಿ ಟೀಕಿಸಿದ್ದಾರೆ.

**'ಗಡಿಯಾರದಂಗಡಿ'** ಕವನವು ವಿಡಂಬನಾತ್ಮಕವಾಗಿದೆ ಹಾಗೂ ಸಿಪಿಕೆ ಅವರ ಮನೋಧರ್ಮಕ್ಕೆ ಸಾಕ್ಷಿಯಾಗಿದೆ. ಪ್ರಜಾಪ್ರಭುತ್ವ ವ್ಯವಸ್ಥೆಯ ಚಿತ್ರಣನನ್ನು ಕಟ್ಟಿಕೊಡುವಲ್ಲಿ ಕವಿತೆ ಯಶಸ್ವಿಯಾಗಿದೆ.

**ಒಂದೊಂದು ಮುಳ್ಳಿಗೂ ಒಂದೊಂದು ದಿಕ್ಕು ;**
**ಸ್ವಾತಂತ್ರ್ಯ ಆಜನ್ಮ ಸಿದ್ಧ ಹಕ್ಕು !**
**ಮನಬಂದ ಹಾಗೆ ವರ್ತಿಸುತಿಹವು ಗಡಿಯಾರ**
**ಕಿಕ್ಕಿರಿದು ಶತ, ಸಾವಿರ !**
**(ಎಷ್ಟೆಂದು ಸರಿಮಾಡಬಲ್ಲನಾ ವ್ಯಾಪಾರಿ!)**
**ಹೇಳಿದರೆ ಕೇಳುವಂತಹ ವಂಶವೇನು ಇದು ?**
**ಪ್ರತಿಯೊಂದಕೂ ತಾನು ನಡೆದುದೇ ದಾರಿ !**
**ಎಷ್ಟಾದರೂ ಇದು ಪ್ರಜಾಪ್ರಭುತ್ವ ;**
**ಎಂತಲೇ ತಲೆಗೊಂದು ತತ್ವ !**

ಸತ್ವ ಕಳೆದುಕೊಂಡಿರುವ ಪ್ರಜಾಪ್ರಭುತ್ವ ವ್ಯವಸ್ಥೆಯನ್ನು, ಏಕತೆಯನ್ನು ಸಾಧಿಲಾಗದ ರಿಪೇರಿ ಮಾಡಲಾಗದ ಗಡಿಯಾರದಂಗಡಿಗೆ ಹೋಲಿಸಿರುವುದು ಸೂಕ್ತವಾಗಿದೆ ಮತ್ತು ಎಚ್ಚರಿಕೆಯ ಘಂಟೆಯಂತೆಯೂ ಇದೆ.

**'ಒಬ್ಬಳು ಸೋದರಿಗೆ'** ಕವನವು ಸೋದರ ಪ್ರೇಮದ ಮಹತ್ವವನ್ನು ಓಡಿದಿಟ್ಟಿದೆ.

**ರತ್ನ ನೀನೊಂದು ಉಜ್ವಲ ರತ್ನ, ನಿಜ, ತಂಗೆ !**
**ಎಂದೊ ಎಲ್ಲಿಯೊ ಕೆಲವು ದಿನ ಮಾತ್ರ ನಿನ್ನ ಬಳಿ**
**ಇದ್ದು ಅರಿತೆನು : ನಿನ್ನ ಸ್ನೇಹ ನಿರ್ಮಲ ಗಂಗೆ !**
**ನಿನ್ನ ಹೃದಯವೆ 'ಅಣ್ಣ' ಎಂಬ ಮಾತಿನಲರಳಿ**
**ಕಂಪೆರಚಿ, ಶಾಂತಿಯನು ಹಣಿಸಿದುದು. ಮೂದಲಿಸಿ**
**ಕಾಲವನು ನೆಲೆಸಿರುವೆ ಎನ್ನ ಹೃನ್ಮಂದಿರದಿ,**
**ಅಚ್ಚಳಿಯದಂಥ ಕತ್ತುರಿಯ ಸುರಭಿಯ ತೆರದಿ !**
**ನಿನ್ನ ಸಾತ್ವಿಕ ರೂಪ ತುಂಬಿಹುದು ಒಳಗಣ್ಣ !**

ಸಮಾಜದಲ್ಲಿ ಜೀವಿಸುವ ಮನುಷ್ಯನಿಗೆ ಸಂಬಂಧಗಳು ಬಹಳ ಮುಖ್ಯ. ಅಂತೆಯೇ ನಂಬಿಕೆ ಕೂಡ ಗಂಡು-ಹೆಣ್ಣಿನ ನಡುವೆ ವಿಷಯವಾಸನೆಯೊಂದೆ ಮುಖ್ಯವಲ್ಲ ಸೋದರತೆಯ ಪ್ರೇಮವೂ ಅಷ್ಟೇ ಅವಶ್ಯಕ ಎಂಬುದನ್ನು ತಿಳಿಸುವುದರ ಜೊತೆಗೆ ಕವಿಗೆ ಹೆಣ್ಣಿನ ಮೇಲಿರುವ ಗೌರವವನ್ನು ಸಹ ತಿಳಿಸುತ್ತದೆ.

**'ತಾರಾಸಖ'** ಕವನ ಸಂಕಲನದ **'ಕಟ್ಟಿದರು ಮನೆಯ'** ಕವನವು ಸಮಾಜದಲ್ಲಿನ ಕ್ರೌರ್ಯ ದರ್ಶನವನ್ನು ನೀಡುತ್ತದೆ. ದುರ್ಬಲರನ್ನು ಶೋಷಣೆ ಮಾಡುತ್ತ ಮೇಲೆರುವ ವ್ಯಕ್ತಿಗಳ ಹಿಂದಿನ ರಹಸ್ಯವನ್ನು ನಿರ್ಭಯವಾಗಿ ತೆರೆದಿಟ್ಟಿದ್ದಾರೆ.

**ಕಟ್ಟಿದರು ಮನೆಯ, ಕಟ್ಟಿದರು ಮನೆಯ:**
**ಇಟ್ಟಿಗೆಗಳಲ್ಲಿ ಮೂಳೆಗಳು.**
**ಮಾಂಸದಾ ಮಣ್ಣನ್ನು**
**ನೆತ್ತರಿನ, ಬೆವರ, ಕಂಬನಿಯ ನೀರಿನಲಿ**
**ಕಲಸಿ ಕಟ್ಟಿದರೋ-**
**ಕಟ್ಟಿದರು ಮನೆಯ. -**

ಈ ಸಾಲುಗಳು ಉಳ್ಳವರು ಮನೆ ಕಟ್ಟಿದ ಬಗೆಯನ್ನು ಅದಕ್ಕಾಗಿ ಇಲ್ಲದವರನ್ನು ಅವರು ಬಳಸಿಕೊಂಡ ರೀತಿಯನ್ನು ತಿಳಿಸುತ್ತವೆ. ಕನಿಕರವಿಲ್ಲದ ಜನ ಕಟ್ಟಿದ ಮನೆ ಮನೆಯಲ್ಲ, ಇದು ಒಂದು ಹಿರಿಯ ಗೋರಿ ಎಂದಿರುವುದು ಅವರ ಅಮಾನವೀಯತೆಗೆ ಸಾಕ್ಷಿಯಾಗಿದೆ. ಬಡ ಜನರ ನಿಟ್ಟುಸಿರು, ಅವರ ಕಂಗಳ ಕಾಂತಿ, ಮನಸಿನ ಶಾಂತಿಯಿಂದ ಮನೆ ಕಟ್ಟಿದ್ದಾರೆ. ಮನುಷ್ಯನಾಗಿ ಹುಟ್ಟಿ ಮಾನವೀಯತೆಯನ್ನು ಮೆರೆಯಬೇಕಾಗಿದ್ದವನು ಅದನ್ನು ಮರೆತು ರಾಕ್ಷಸನಂತೆ ವರ್ತಿಸುತ್ತಿದ್ದಾನೆ. ಸಮಾಜದಲ್ಲಿ ಸಹಬಾಳ್ವೆ ನಡೆಸಬೇಕಾಗಿದ್ದವನು ಹಣ, ಅಧಿಕಾರ ಬಲದಿಂದ ಕೈಲಾಗದವರನ್ನು ತುಳಿದು ಅವರ ಎದೆ ಮೇಲೆ ಭೀಭತ್ಸ ನರ್ತನ ಮಾಡುತ್ತಿರುವ ಚಿತ್ರಣ ಮತ್ತು ಅವರ ರಕುತದಿ ತಮ್ಮ ಸುಖದ ಚಿತ್ರವ ಬರೆದಿರುವುದು ಶೋಷಣೆಯ ಭೀಕರತೆಗೆ ಓಡಿದ ಕನ್ನಡಿಯಂತಿದೆ.

ಸಮಾಜದಲ್ಲಿ ನೋವು ನರಳಾಟಗಳಿಂದ ನರಕವನ್ನು ಕಾಣುತ್ತಿರುವುದನ್ನು ಕಂಡು ಕೇಳಿಯು ಕುರುಡರು, ಕಿವುಡರಾಗಿದ್ದಾರೆ. ಎಲ್ಲವನ್ನು ಬಾಚುವ ಕಬಳಿಸುವ ಕೆಲಸ ಮಾಡುತ್ತಿದ್ದಾರೆ.

**ನಾಕವನೆ ನಾಚಿಸಲು**
**ಕಟ್ಟಿದರು ಮನೆಯ**
**ಕಾಳನಾಗದ ಹುತ್ತ ಮಾಡಿ ಮನವ !**

**'ಕಾಳನಾಗದ** ಹುತ್ತ ಮಾಡಿ ಮನವ' ಎಂಬ ಸಾಲು ಹಾವು ವಿಷಪೂರಿತ, ಅದರ ಬಳಿ ಯಾರು ಬರುವುದಿಲ್ಲ ಹೆದರುತ್ತಾರೆ ಎಂಬುದನ್ನು ಧ್ವನಿಸುವುದರ ಜೊತೆಗೆ ಸಮಾಜದಲ್ಲಿ ಇಂಥ ಹುತ್ತಕ್ಕೆ ಸ್ಥಾನವಿಲ್ಲ, ಅದರ 'ನಾಶ' ಖಂಡಿತ ಎಂಬುದನ್ನು ಸಹ ಧ್ವನಿಸುತ್ತದೆ.

ಕಳೆದು ಹೋದ ಕಾಲವನ್ನು ಹಿಂದಿರುಗಿ ಪಡೆಯಲಾಗುವುದಿಲ್ಲ, ಕಾಲವನ್ನು ಹಿಡಿದು ನಿಲ್ಲಿಸಲು ಸಾಧ್ಯವಿಲ್ಲ. ಆದ್ದರಿಂದಲೇ ಕಾಲಕ್ಕೆ ಮಹತ್ವದ ಸ್ಥಾನವಿದೆ. ಆದರೆ ಅದರ ಮಹತ್ವಕ್ಕೆ ಬೆಲೆ ಕೊಡಬೇಕೆಂದುಕೊಂಡರು ಕೊಡದೆ ಜೀವಿಸುತ್ತಿರುವುದರ ಬಗ್ಗೆ **'ಅಲರಾಂ'** ಕವಿತೆ ತಿಳಿಸುತ್ತದೆ.

**ಗಡಿಯಾರಗಳ ಮಾಡಿದವರು ನಾವು ;**
**ಅಲಾರಂ ಗಂಟೆಯನು ಇಡುವವರು ನಾವು ;**
**ಮತ್ತೆ ಸುಖನಿದ್ರೆಗದು ಭಂಗವನು ತಂದಾಗ**
**ಬಾಯಿ ಮುಚ್ಚಿಸುವಂಥ ಶೂರರೂ ನಾವು !**
**ಕೂಗುತಿದೆ ಗಡಿಯಾರ ನಿತ್ಯ ;**
**ಸಾಗಿಯೇ ಸಾಗುತ್ತಿದೆ ಸ್ವಪ್ನ !**

ಮನುಷ್ಯ ಕಾಲದ ಮಹತ್ವನ್ನು ತಿಳಿದು ಜೀವನ ನಡೆಸಬೇಕು ಇಲ್ಲದಿದ್ದಲ್ಲಿ ಕನಸುಗಳು ಕನಸಾಗಿಯೇ ಉಳಿಯುತ್ತವೆ ಎಂಬ ವಾಸ್ತವತೆಯನ್ನು ಇಲ್ಲಿ ಚಿತ್ರಿಸಿದ್ದಾರೆ.

**'ತಾರಾಸಖ'** ಕವನ ಸಂಕಲನದ **'ಸಂಕೋಲೆ'** ಕವನದಲ್ಲಿ ಬ್ರಿಟಿಷರ ದಾಸ್ಯದಿಂದ ಬಿಡುಗಡೆಗೊಂಡ ನಂತರ ನಾವು ಸ್ವತಂತ್ರರಾದೆವು ಎಂದು ಭಾಷಣ ಪತ್ರಿಕೆಗಳ ಮೂಲಕ ಹೇಳುತ್ತಿದ್ದೇವೆ. ಸ್ವಾತಂತ್ರ್ಯ ದೊರಕಿತು ಇನ್ನು ಪ್ರಗತಿ ಹೊಂದುತ್ತೇವೆಂದುಕೊಂಡರೂ ನಿಜವಾಗಿಯೂ ನಾವು ಸಂಕೋಲೆಗಳ ಸರಮಾಲೆಯನ್ನೇ ಹಾಕಿಕೊಂಡು ಬದುಕುತ್ತಿದ್ದೇವೆ ಎಂಬುದನ್ನು ವಿಡಂಬನಾತ್ಮಕವಾಗಿ ಹೇಳಿದ್ದಾರೆ.

**'ನಾವ್ ಸ್ವತಂತ್ರರು–**
**ನಮಗಿಲ್ಲ ದಾಸ್ಯದ ಸಂಕೋಲೆ...'**

ಎಂದು ಪ್ರಾರಂಭವಾಗುವ ಕವನ ಮುಂದೆ ಮನುಷ್ಯ ನಿಜವಾಗಿಯೂ ದಾಸ್ಯನಾಗಿ ಜೀವಿಸುತ್ತಿರುವುದನ್ನು ತಿಳಿಸುತ್ತಾರೆ.

**ನೂರು ಮದಿಸಿದ ಕುದುರೆಗಳು ಕಿತ್ತು ಕಡಿವಾಣ**
**ಮೈಯೊಳಗೆ ಹುಚ್ಚೆದ್ದು, ಕೆನೆದು ಕುಣಿದಿರಲು,**
**ಅವಕೆಮ್ಮ ಶರಣಾಗತಿ !**
**ಘೀಳಿಡುವ ಮದಿಸಿದಾನೆಗಳ ತುಳಿತ.......**
**ತುಳಿತಕ್ಕೆ ಮೈಗೊಟ್ಟು ಗಾಸಿಪಡುತಿರಲು**
**ನಿಷ್ಫಲವು ನಮ್ಮ ತ್ರಾಣ !**

ಮನುಷ್ಯನ ಮನಸ್ಸು ಒಂದು ದೊರೆತರೆ ಮತ್ತೊಂದು ಬೇಕು ಎನ್ನುವಂಥದ್ದು. ತನ್ನ ಆಸೆ, ಬಯಕೆಗಳನ್ನು ನಿಗ್ರಹಿಸುವ, ತನ್ನಿಚ್ಛೆಯಂತಿರುವ ಸ್ವಾತಂತ್ರ್ಯ ಅವನಿಗಿಲ್ಲ. ಬಯಕೆಗಳಿಗೆ ಶರಣಾಗುತ್ತಾನೆ. ನಮ್ಮೊಳಗೇ ನಮ್ಮ ಶತ್ರುಗಳಿದ್ದು, ಕಾಣದ ಸಂಕೋಲೆಗಳಿಂದ ಬಂಧಿಸಲ್ಪಟ್ಟದ್ದೇವೆ. 'ನಾವ್ ಸ್ವತಂತ್ರರು, ಸ್ವರ್ಗೀಯವೋ ನಮ್ಮ ಜನ ಜೀವನ! ಎಂಬ ಸಾಲು ಮನುಷ್ಯನ ಸ್ವಾತಂತ್ರ್ಯವನ್ನು ಅಣಕಿಸುವಂತಿದೆ.

ಮಾನವತೆಯ ಸಂಕೋಲೆಯ ಕಗ್ಗಂಟನ್ನು ಬಿಡಿಸಲು ಹಲವು ಮಹಾನ್ ವ್ಯಕ್ತಿಗಳು ಹೆಣಗಿದ ಬಗೆಯನ್ನು ತಿಳಿಸುತ್ತಾರೆ.

**ಸ್ವಾತಂತ್ರ್ಯ ಸಾಧನೆಗೆ ದುಡಿದು ಮಡಿದವರೆಷ್ಟು ಮಂದಿ!**
**ಬುದ್ಧ, ಮಹಾವೀರ, ಶಂಕರ, ಬಸವ, ಪರಮಹಂಸ,**
**ವಿವೇಕಾನಂದ.. ಓಹ್ ! ಪಟ್ಟಿಗೆಲ್ಲಿ ಕೊನೆ ?**
**ಆಯಿತೇ ಪ್ರೇತಗಳ ಉಚ್ಚಾಟನೆ ;**

ನಾವು ಸ್ವಾತಂತ್ರ್ಯರು, ನಮ್ಮ ಅಭ್ಯುದಯ ಈಗ ನಿಷ್ಕಂಟಕವಾಗಿ ನಡೆಯುತ್ತದೆ ಎಂದು ಧ್ವನಿವರ್ಧಕ, ಉಪನ್ಯಾಸ ವೇದಿಕೆಗಳಲ್ಲಿ ಸಾರುತ್ತಿರುವ ಮನುಷ್ಯ ನಿಜವಾಗಿಯೂ ತನ್ನಲ್ಲೇ ಇರುವ ಸಂಕೋಲೆಗಳಿಂದ ಬಿಡುಗಡೆ ಹೊಂದಬೇಕಾಗಿದೆ. ಅದರ ಹೊರತು ಆತನ ಅಭ್ಯುದಯ ಆ ಮೂಲಕ ಸಮಾಜದ, ದೇಶದ ಅಭ್ಯುದಯ ಸಾಧ್ಯವಿಲ್ಲ ಎಂಬ ಆಶಯ ಕವಿಯದಾಗಿದೆ.

**'ತಾರಾಸಖ'** ಕವನ ಸಂಕಲನದ **'ಸಾಂತ್ವನ'** ಕವಿತೆಯು ನೊಂದ ಜೀವಕ್ಕೆ ಗೆಳೆಯನೊಬ್ಬ ಸಮಾಧಾನ ಪಡಿಸುತ್ತಿರುವ, ವಾಸ್ತವವನ್ನು ಒಪ್ಪಿಕೊಂಡು ಧೈರ್ಯದಿಂದ ಜೀವನ ನಡೆಸಬೇಕೆಂದು ಹೇಳುತ್ತಿರುವ ಈ ಕವಿತೆ ಸಾಮಾಜಿಕ ದೃಷ್ಟಿಯಿಂದ ಆರೋಗ್ಯ ಪೂರ್ಣವಾಗಿದೆ.

**ಬಿಗಿದ ಮುಖವನು ಸಡಿಲಗೊಳಿಸು ಗೆಳೆಯ–**
**ನೋಡದಿರು ಬಿರುಗಣ್ಣಿನಿಂದ ಇಳೆಯ–** ಎಂದು ಹೇಳುತ್ತಾ
**ಏಕತಾನನತೆಯಿಂದ ಕೂಡಿದ ಬೇಸರದ ಬದುಕು ಬೇಡ**
**ಉಕ್ಕಾಗದಿರಲಿ ಮುಖ, ಹೂವಾಗಲಿ.**
**ನಲಿವು–ನಗೆಯ ತರಂಗ ಹರಿದಾಡಲಿ. –**

ಎಂಬ ಸಾಲುಗಳು ಸ್ನೇಹಕ್ಕೆ ಹಿಡಿದ ಕನ್ನಡಿಯಂತಿವೆ.

ಕವಿತೆಯ ಕೊನೆಯಲ್ಲಿ

**ಸೃಷ್ಟಿ ವೈವಿಧ್ಯಮಯ : ಇದೆ ಒಳ್ಳಿತು ;**
**ಬಿಗಿದ ತುಟಿಯನು ತೆರೆಯೊ ಕಹಿಯ ಮರೆತು !**

ಎಂದು ಹೇಳುವ ಮೂಲಕ ಜೀವನದ ನಲಿವಿಗೆ ಹಲವಾರು ದಾರಿಗಳಿಗೆ, ನೋವನ್ನು ಮರೆತು ನಗುವಿನ ನೆಲೆಯಲ್ಲಿ ಬಾಳು ಕೂಡಿರಲಿ ಎಂಬ ಕವಿಯ ಹಂಬಲ ಕವಿತೆಯಲ್ಲಿ ಬೆಳಗಿದೆ.

**'ತಾರಾಸಖ'** ಕವನ ಸಂಕಲನದ **'ಜೈತ್ರಯಾತ್ರೆ'** ಕವನವು ಮಾನವ ಜೀವನದ ವೈಭವದ ಯಾತ್ರೆಯ ದಿಕ್ಕನ್ನು ತಿಳಿಸುತ್ತದೆ.

ಭಾರತೀಯ ನೆಲದಲ್ಲಿ ಶಾಂತಿ ಮಂತ್ರ ಕ್ರಿ.ಪೂ.ದ ಬುದ್ಧನಿಂದಲೇ ಮೊದಲ್ಗೊಂಡು ಗಾಂಧಿಯವರೆಗೂ ನಡೆದಿದೆ. ಇಂದು ನಾವು ಬುದ್ಧ, ಬಸವ, ಗಾಂಧಿ, ಇವರೆ ಮೊದಲಾದವರು ನಡೆದ ಹಾದಿಯಲ್ಲೇ ಸಾಗುತ್ತಿದ್ದೇವೆ. ಆದರೆ ವಾಸ್ತವವೇನು? ಎಂಬ ಪ್ರಶ್ನೆ.

**ಇಂದೇನು ನಡೆದಿಹುದು ನಮ್ಮ ಈ ನಾಡಿನಲಿ ;**
**ಎಲ್ಲೆಡೆ ಮಹೋತ್ಸವದ ಕೋಲಾಹಲ.**
**ಹೊಸ ಉಸಿರು ಆಡುತಿದೆ, ಹೊಸ ಗಾಳಿ ತೀಡುತಿದೆ–**
**ಏನೋ ಆಗಿದೆ ಇಲ್ಲಿ ಇಂದ್ರಜಾಲ !**

ಶಾಂತಿ ಮಂತ್ರ ಜಗಪಿಸಿದವರ ಹೆಸರಿನಲ್ಲಿ ನಡೆಯುವ ಮಹೋತ್ಸವಗಳಲ್ಲಿ ನೆಲಬಾನುಗಳು ಪುಳಕಗೊಳ್ಳುವಂತೆ, ಜನರನ್ನು ಮರುಳುಗೊಳಿಸುವ, ಬೆರಗುಗೊಳಿಸುವ ಮಾತುಗಳ ಮೂಲಕವೇ ರಾಮರಾಜ್ಯ ಸ್ಥಾಪನೆಯ ಕನಸು ಕಟ್ಟಿ, ನಾವು ಹೊರಟ್ಟಿದ್ದೇವೆ ತರಲೆಂದು ಶಾಂತಿ ಸರ್ವೋದಯದ ದಿವ್ಯ ಅಕ್ಷಯ ಪಾತ್ರೆ.

ನಾವು ತರಲೆಂದು ಹೊರಟಿರುವ ಶಾಂತಿ ಮಂತ್ರ ಯಾತ್ರೆ ಇಂದು ನೆನ್ನೆಯದಲ್ಲ ಎನ್ನುತ್ತಾ ಕೇಳುತಿದೆ ಪ್ರಾಚೀನ ಋಷಿವಾಣಿ.

**'ಅಸತೋ ಮಾ ಸದ್ಗಮಯ,**
**ತಮಸೋ ಮಾ ಜ್ಯೋತಿರ್ಗಮಯ,**
**ಮೃತ್ಯೋರ್ಮಾ ಅಮೃತಂಗಮಯ'.**
**ಹೌದು ನಾವು ಹೊರಟ್ಟಿದ್ದೇವೆ ಪಯಣ.**

ಅಂದು ಬುದ್ಧ, ಬಾಹುಬಲಿಯರು ನಡೆದ ಮಾರ್ಗವೇ ನಮಗೆಲ್ಲ ದಾರಿದೀಪ ಎಂದುಕೊಂಡು ಸಾಮ್ರಾಟ ಅಶೋಕನಾದಿಯಾಗಿ ಇಡೀ ವಿಶ್ವವೇ ತಿರುಗಿತ್ತು ಅವನೆಡೆಗೆ ನಾನು, ನನ್ನದು ಎಂಬ ಸುಖ ಸ್ವಾರ್ಥ ಸುಖಲೋಲುಪತೆ ಮುಂತಾದ ಭಾವನೆಗಳನ್ನು ತೊರೆದು ಹಾರಿಸಿದ ವಿಜಯ ಪತಾಕೆಯು ನಮ್ಮದಾಗಿಲ್ಲ ಎಂಬ ನಿರಾಸೆಯ ಭಾವನೆ ಕವಿ ಮನದಲ್ಲಿ ಮೊಳೆತಿದೆ.

ನೆನ್ನೆ ಮೊನ್ನೆಯ ಮಾತು ಬರಿಯ ಮೈಯ ಬಡಮುದುಕನಿಗೆ ಸೂರ್ಯ ಮುಳುಗದ ಸಾಮ್ರಾಜ್ಯವೇ ನಡುಗಿ ತಲೆ ತಗ್ಗಿಸಿತ್ತು. ಆದರೆ ನಮ್ಮವರೆ ಕೊಂದರು, ಗುಂಡಿಟ್ಟು. ಅದು ಅಂದಿಗೆ ಕೊನೆಯಾಗದೇ ದಿನನಿತ್ಯವು ಕೊಲ್ಲುತ್ತಿದ್ದೇವೆ ನಾವೆಲ್ಲರೂ. ಅದಕ್ಕಾಗಿ ಹೊರಗಿನವರಿಗಿಂತ ಒಳಗಿನವರ ಬಗ್ಗೆಯೇ ಎಚ್ಚರವಾಗಿರಬೇಕಾಗಿದೆ. ಇಂದು ನಾವು ಎಂಬ ಮಾತು ಅರ್ಥಗರ್ಭಿತವಾಗಿದೆ.

ಹಿಮಾಲಯದಿಂದ ಚಾಮುಂಡಿ ಬೆಟ್ಟದ ನಡುವೆ ನಡೆಯುತ್ತಿರುವ ನಮ್ಮ ಜೈತ್ರಯಾತ್ರೆ ಬರಿ ಪೊಳ್ಳು, ಸುಳ್ಳು, ಡೋಂಗಿತನದಿಂದ ಕೂಡಿದ್ದು. ಲೋಕ ಮೆಚ್ಚಿಸಲಿಕ್ಕೆ ಮಾತ್ರವೇ ಆಗದೆ ಅದು ವಿಶ್ವ ಶಾಂತಿಯ ಮಂತ್ರವೇ ಆದರೆ ಒಳಿತು. ಆಗ ಮಾತ್ರ ಇಂದಲ್ಲ ನಾಳೆ ನಾವಂದುಕೊಂಡ ಗುರಿಯನ್ನು ಮುಟ್ಟಬಹುದು.

**'ಅನಂತ-ಪೃಥ್ವಿ'** ಕವನ ಸಂಕಲನದ **'ಬೀದಿಯ ನಲ್ಲಿ'** ಕವನವು ಸಾಮಾನ್ಯ ಜನರ ಬದುಕಿನ ಬವಣೆಯ ಕಥೆಯಾಗಿದೆ. ಮನುಷ್ಯನಿಗೆ ಮೂಲಭೂತ ವಸ್ತುಗಳ ಅವಶ್ಯಕತೆಯಿದೆ. ಆದರೆ ಅವುಗಳನ್ನು ಪೂರೈಸುವಲ್ಲಿ ಸರ್ಕಾರ ವಿಫಲವಾಗಿದೆ. ಅದರಿಂದಾಗಿ ಸಮಾಜದ ಮೇಲಾಗುವ ಪರಿಣಾಮ ಮತ್ತು ಜನರ ಪಾಡನ್ನು ಈ ಕವಿತೆ ಚಿತ್ರಿಸುತ್ತದೆ.

ಮಧ್ಯಾಹ್ನದ ಬಿಸಿಯೂಟ ಉಂಡು ಅರೆನಿದ್ದೆಯಲ್ಲಿದ್ದು, ನೀರಿಗಾಗಿ ಕಾಯುತ್ತಿದ್ದ, ಬೀದಿಯ ಜನರಿಗೆ ಕೇಳಿಸಿದ್ದು ನಲ್ಲಿಯ ಕೊರಕೊರ ಸದ್ದು, ನೀರಿನ ಸದ್ದಲ್ಲ. ಇನ್ನೂ ಬಾರದ ನೀರಿಗಾಗಿ

**ಆಗಲೇ ಸುರುವಾಯ್ತು ವಿಧವಿಧದ ಪಾತ್ರೆಗಳ**
**ಮೆರವಣಿಗೆ ;**
**ಮಂದಿ ಮಕ್ಕಳು ಎಲ್ಲ ಕ್ಯೂ ನಿಲ್ಲಬೇಕಿನ್ನು ;**
**ಇಲ್ಲವೋ- ನೀರಿಲ್ಲ ಮನೆಗೆ !**

ಹೀಗೆ ನೀರು ಹಿಡಿಯಲು ನಾ ಮೊದಲು ತಾ ಮೊದಲು ಎಂದು ಜಗಳಗಳು ಜರುಗುತ್ತವೆ ಅದು ನಲ್ಲಿಯ ನೀರು ಬತ್ತುವ ತನಕ. ನೀರಿಗಾಗಿ ದೊಡ್ಡ ರಾದ್ಧಾಂತವೇ ನಡೆಯುತ್ತದೆ. ಈ ಸಂದರ್ಭದಲ್ಲಿ-

**ಕೇಳಿಸಿತು ಒಳಗೆಲ್ಲೊ ತಂಗಿ ಗೊಣಗಿದ ಮಾತು;**
**ನಮ್ಮ ಮನೆಯೊಳಗೊಂದು ನಲ್ಲಿಯಿಲ್ಲದ ಮೇಲೆ**
**ಈ ಬವಣೆಯಿಂದಿಲ್ಲ ಬಿಡುಗಡೆ !**

ತಂಗಿಯ ಈ ಮಾತು ಸಾಮಾನ್ಯ ಜನರ ಅಸಹಾಯಕ ಸ್ಥಿತಿಯನ್ನು ಸೂಚಿಸುತ್ತದೆ. ಬೀದಿಯ ನಲ್ಲಿಯಲ್ಲಿ ಸಾಕಷ್ಟು ನೀರನ್ನು ಸರ್ಕಾರ ಪೂರೈಸುವ ತನಕ ಅಥವಾ ಮನೆಗೆ ನಲ್ಲಿ ಹಾಕಿಸುವಷ್ಟು ಚೈತನ್ಯ ದೊರೆಯುವ ತನಕ ಈ ಬವಣೆ ತಪ್ಪಿದ್ದಲ್ಲ ಎಂದು ಸಾಮಾಜಿಕ ಸಮಸ್ಯೆಯನ್ನು ಅನಾವರಣಗೊಳಿಸಿದ್ದಾರೆ.

**'ಪಕ್ಷಪಾತ'** ಕವನವು ಮನುಷ್ಯ ತಾನು ಮಾತ್ರ ಸ್ವಾರ್ಥಿಯಾಗಿ ತನ್ನ ಜೀವಕ್ಕೆ ಮಾತ್ರ ಬೆಲೆಕೊಟ್ಟು ಇತರ ಜೀವಿಗಳನ್ನು ಕಡೆಗಣಿಸಿ ತಾರತಮ್ಯ ನೀತಿ ಅನುಸರಿಸುತ್ತಿದ್ದಾನೆ ಎಂದು ಮಾನವೀಯ ಮೌಲ್ಯಗಳನ್ನು ಕಳೆದುಕೊಂಡಿರುವ ಸಮಾಜವನ್ನು ಎಚ್ಚರಿಸುವ ಪ್ರಯತ್ನ ಮಾಡಿದ್ದಾರೆ.

ಮನುಷ್ಯ ತನ್ನ ಅನುಕೂಲಕ್ಕಾಗಿ ಮಾಡಿಕೊಳ್ಳುವ ಕೆಲಸಗಳಿಂದಾಗಿ ಪರಿಸರದ ಅಮಾಯಕ ಜೀವಗಳ ಬಲಿ ಆಗುತ್ತಿದೆ. ವಿದ್ಯುತ್ ಕಂಬಗಳನ್ನು ನೆಟ್ಟು ತನ್ನ ಮನೆ ಬೆಳಗಿಸಿಕೊಳ್ಳುವ ಮಾನವ ಏನು ಅರಿಯದ ಸ್ವಚ್ಛಂದವಾಗಿ ಹಾರಾಡುತ್ತಾ ಪರೋಪಕರಾರವನ್ನೇ ಬಯಸುವ ಪಕ್ಷಿಗಳ ಬದುಕನ್ನು ಕಿತ್ತುಕೊಳ್ಳುತ್ತಿದ್ದಾನೆ. ಮುಖ್ಯವಾಗಿ ಕಾಗೆ.

**ವಿದ್ಯುದಾಲಿಂಗನಕೆ ಸಿಕ್ಕಿ ಸತ್ತಿದೆ ಕಾಗೆ,**
**ತಪ್ಪು ಮಾಡದ ವ್ಯಕ್ತಿ ಶಿಕ್ಷೆ ಪಡೆಯುವ ಹಾಗೆ !**

ತನ್ನಿಂದಾಗಿ ಕಾಗೆ ಬಲಿಯಾದುದಕ್ಕೆ ಒಂದಿಷ್ಟು ಮರುಕವನ್ನು ವ್ಯಕ್ತಪಡಿಸಲೊಲ್ಲ ಈ ಕೃತಘ್ನ ಎಂದು ಸಮಾಜದ ಜನರನ್ನು ನೇರವಾಗಿ ಟೀಕಿಸಿದ್ದಾರೆ.

ಮನುಜ ಸತ್ತರೆ ಬಂದಿವರು ಮಾಡುವರು ಸಂತೆ,
ಕಾಗೆಗಿಲ್ಲವೆ ಜೀವ ಮಾನವನಿಗಿರುವಂತೆ ?
ಇಂತಿಳಿಕೆಗೈಯುವುದು ನಮಗೆ ತರವೇ ಬಂಧು ?
ಸೃಷ್ಟಿಸಿದ ದೇವನೆಂಬನೆ ಹಿರಿದು-ಕಿರಿದೆಂದು ?

ತಾನು ಮಾತ್ರ ಶ್ರೇಷ್ಠ, ತನ್ನ ಜೀವಕ್ಕೆ ಮಾತ್ರ ಬೆಲೆ ಎಂದು ಅಹಂಕಾರದಿಂದ, ಅಮಾನವೀಯತೆಯಿಂದ ವರ್ತಿಸುವ ಮನುಷ್ಯನಿಗೆ ಸೃಷ್ಟಿಯ ಎಲ್ಲ ಜೀವಿಗಳು ಒಂದೇ ಮೇಲು ಕೀಳೆಂಬುದಿಲ್ಲ ಎಂಬ ಕಿವಿ ಮಾತು ಹೇಳುತ್ತಾ ಕೃತಜ್ಞನಾಗಬೇಕೆಂದಿದ್ದಾರೆ.

ಸಮಾಜದ ಮತ್ತು ಸಂಸಾರದ ಕಣ್ಣು ಹೆಣ್ಣು, ಮನೆಯ ಬೆಳಕು ಹೆಣ್ಣು, ತಾಯಿಯಾಗಿ, ಮಗಳಾಗಿ ಅಕ್ಕ-ತಂಗಿಯಾಗಿ, ಹೆಂಡತಿಯಾಗಿ, ಗೆಳತಿಯಾಗಿ ಮಹತ್ವದ ಸ್ಥಾನ ಪಡೆದಿದ್ದಾಳೆ.

'ಅನಂತ ಪೃಥ್ವೀ' ಕವನ ಸಂಕಲನದ 'ಮಗಳು' ಕವಿತೆಯಲ್ಲಿ ಮಗಳಾಗಿ ಹೆಣ್ಣು ನಿರ್ವಹಿಸುವ ಪಾತ್ರದ ಮಹತ್ವವನ್ನು ಕುರಿತು ತಮ್ಮ ಚಿಂತನೆಯನ್ನು ಕವನವಾಗಿಸುವ ಮೂಲಕ ಹೆಣ್ಣಿಗೆ ಗೌರವ ನೀಡಿದ್ದಾರೆ.

ಈ ಮನೆಯ ಸರ್ವಾಧಿಕಾರಿಯಿಂದೀ ಪೋರಿ-
ಬೆಳಕು ಕತ್ತಲು ನಿಯಂತ್ರಿಸುವ ಶಕ್ತಿ !
ಒಲಿದಾಗ ನಮ್ಮ ಪಾಲಿಗೆ ಇವಳು ಶಿವೆ, ಗೌರಿ ;
ಮುನಿದರಿವಳೇ ದುರ್ಗೆ, ದಾಕ್ಷಾಯಿಣಿ !

ಈ ಸಾಲುಗಳು ಹೆಣ್ಣಿನ ಶಕ್ತಿ ಮತ್ತು ಪಾತ್ರದ ಬಗ್ಗೆ ಬೆಳಕು ಚೆಲ್ಲುತ್ತವೆ.

ಹಾರೈಸುವೆನು : ನನ್ನ ಭಾರತಿಯ ತುಟಿಗಳಲಿ
ತುಳುಕುತಿಹ ಬೆಳ್ನಗೆ ಮಾಸದಿರಲಿ ;
ಆಲ ತೆಂಗು ತಮಾಲವಾಗಲೀಕೆಯ ಬದುಕು,
ಏನು ಬೇಕಾದರೂ ನನಗೆ ಬರಲಿ !

ಎಂದು ಹರಸಿರುವುದು ಹೆಣ್ಣನ್ನು ಕಡೆಗಣಿಸುತ್ತಿರುವ, ಅಗೌರವದಿಂದ ನಡೆಸುತ್ತಿರುವ ಸಮಾಜಕ್ಕೆ ಸಂದೇಶದ ಪಾಠದಂತಿದೆ.

'ನೀವೆ ನಮಗೆ ದಿಕ್ಕು' ಕವನ ಸಂಕಲನದ 'ಭಸ್ಮಾಸುರರು' ಕವಿತೆ ಇಂದಿನ ಸಾಮಾಜಿಕ ಮತ್ತು ರಾಜಕೀಯ ಪರಿಸ್ಥಿತಿಗೆ ಹಿಡಿದ ಕನ್ನಡಿಯಂತಿದೆ.

ಅಧಿಕಾರವಿದ್ದಾಗ ಕೆಲವರು ಕೆಲವರ
ಕಪಟ ತಪಸ್ಸಿಗೆ ಮೆಚ್ಚಿ,
ವರ ಕೊಟ್ಟು,
ಸೃಷ್ಟಿಸುತ್ತಾರೆ. ಭಸ್ಮಾಸುರರನ್ನು
ಈ ಅಭಿನವ ಭಸ್ಮಾಸುರರು ತಮ್ಮ ಸೃಷ್ಟಿಕರ್ತರ,
ಇತರರ ತಲೆಯ ಮೇಲೆ ಕೈಯಿಡುತ್ತಾರೆ ಹೊರತು
ಎಂದೂ ತಮ್ಮ ತಲೆಯ ಮೇಲೆ ತಾವು
ಕೈಯಿಟ್ಟುಕೊಳ್ಳದ ಜಾಣರು ;
ಯಾವ ಮೋಹಿನಿಗೂ ಮರುಳಾಗದ ಹೂಣರು !

ಹೀಗೆ ತಮ್ಮನ್ನು ಸೃಷ್ಟಿಸಿದವರ ಮತ್ತು ಇತರ ಅಮಾಯಕರ ಮೇಲೆ ಕೈ ಇಡುತ್ತಿರುವ ಭಸ್ಮಾಸುರರನ್ನು ಶಿಕ್ಷಿಸಲು ಶಿವನ ಹಣ್ಣೆಗಣ್ಣಿನಿಂದ ಮಾತ್ರ ಸಾಧ್ಯ. ಆದರೆ ಈಗ ಅದು ಸಾಧ್ಯವಿಲ್ಲ. ಅದಕ್ಕಾಗಿಯೇ ಅಸುರಗೋತ್ರ ಅಡೆತಡೆಯಿಲ್ಲದೆ ಬೆಳೆಯುತ್ತಿದೆ ಎಂಬ ಆತಂಕ ವ್ಯಕ್ತಪಡಿಸಿದ್ದಾರೆ.

**'ನಿರ್ಣಯ'** ಕವನದಲ್ಲಿ ಸಮಾಜದಲ್ಲಿ ಇರುವ ಕೆಟ್ಟವರು ಮತ್ತು ಕೆಟ್ಟದ್ದರ ವಿರುದ್ಧ ಹೋರಾಟ ಮಾಡುವುದು ತಪ್ಪು ಎಂಬ ನಿರ್ಣಯಕ್ಕೆ ಬಂದ ಕವಿ ತಮ್ಮ ಅಸಹಾಯಕತನವನ್ನು ಹಾಗು ವಾಸ್ತವ ಸಮಾಜದ ಜನರ ಮನಸ್ಥಿತಿಯನ್ನು ತಿಳಿಸುತ್ತದೆ.

**ಈಗ ಈ ನಿರ್ಣಯಕ್ಕೆ ಬಂದಿದ್ದೇನೆ :**
**ಕೆಟ್ಟವರ ವಿರುದ್ಧ, ಕೆಟ್ಟದ್ದರ ವಿರುದ್ಧ**
**ದನಿಯೆತ್ತುವುದು, ಹೋರಾಡುವುದು**
**ಶುದ್ಧ ತಪ್ಪು,**
**ತೆಪ್ಪಗಿರುವುದು ಒಳಿತು !**

ಎಂದು ಹೇಳುತ್ತಾ ಅದಕ್ಕೆ ಮೂರು ಕಾರಣಗಳನ್ನು ಸಹ ನೀಡಿದ್ದಾರೆ ಅನ್ಯಾಯವನ್ನು ಸಹಿಸದ ವ್ಯಕ್ತಿಯೂ ಸಹ ಹೇಗೆ ಕೆಲವೊಮ್ಮೆ ಅದಕ್ಕೆ ಬುದ್ಧನಾಗ ಬೇಕಾಗುತ್ತದೆ ಎಂಬುದನ್ನು ಅವು ಸಮರ್ಥಿಸುತ್ತವೆ. ಕೆಟ್ಟದ್ದನ್ನು ತಡೆಯಲಾಗದ ಕೆಟ್ಟವರ ವಿರುದ್ಧ ಹೋರಾಡಲಾಗದ ತಮ್ಮ ಅಸಹಾಯಕ ಸ್ಥಿತಿಯ ಬಗ್ಗೆ ಮರುಗುತ್ತಾ

**ದೇವರೇ, ಹಾಗಾದರೆ,**
**ಕೆಟ್ಟದ್ದರ ನಿರಸನ ಹೇಗೆ ?**

ಎಂದು ದೇವರ ಮೊರೆ ಹೊಕ್ಕಿದ್ದಾರೆ.

**'ನೀವೆ ನಮಗೆ ದಿಕ್ಕು'** ಕವನ ಸಂಕಲನದ **'ಶೇಷ ಪ್ರಶ್ನೆ'** ಕವನವು ದ್ವೇಷ, ಅಸೂಯೆ, ದುರಾಸೆಗಳಿಂದ ಪರಸ್ಪರ ಹಗೆ ಸಾಧಿಸುತ್ತಿರುವ ಸಮಾಜ ಜೀವಿಗಳು ಇಡೀ ಭೂಭಾರವನ್ನು ಹೊತ್ತಿರುವ ಆದಿಶೇಷನ ಪ್ರಶ್ನೆಯನ್ನು ಅಗತ್ಯವಾಗಿ ಪರಿಗಣಿಸಲೇಬೇಕೆಂಬ ಆಶಯವನ್ನು ಹೊಂದಿದೆ.

**ಮಹಾಭಾರತದಾದಿಯಲ್ಲಿ**
**ಬ್ರಹ್ಮನನ್ನು ಕೇಳುತ್ತಾನೆ ಶೇಷ :**
**"ನಮ್ಮ ನಮ್ಮೊಳಗೆ ಏಕೆ ಈ ದ್ವೇಷ ?**
**ನನ್ನ ಸರ್ಪ ಸೋದರರು ಹಗೆಯುತ್ತಾರೆ ಇನ್ನೊಬ್ಬ ಸೋದರನಾದ**
**ತೇಜಸ್ವಿಗರುಡನನ್ನ.**
**ನನಗೆ ಬೇಸರ ತಂದಿದೆ, ಹೇಸಿಕೆ ಹುಟ್ಟಿಸಿದೆ.**
**ಈ ನಿರ್ನಿಮಿತ್ತ ಸೋದರ ದ್ವೇಷ ;**
**ಬೇಡವೆ ಬೇಡ ನನಗೆ ಇವರ ಸಹವಾಸ ;**
**ಮಾಡುತ್ತೇನೆ ತಪದಿಂದ ದೇಹತ್ಯಾಗ".**

ಆದಿಶೇಷನ ಈ ಪ್ರಶ್ನೆಗೆ ಬ್ರಹ್ಮ ಸಾಂತ್ವನ ಹೇಳಿ ಭೂಮಿ ಹೊತ್ತು ಕೊಂಡಿರು ಎಂದು ಹೇಳಿದ, ಅಂದಿನಿಂದ ಇಂದಿನವರೆಗೂ ತನ್ನ ಕರ್ತವ್ಯ ನಿರ್ವಹಿಸುತ್ತಿದ್ದಾನೆ. ಅವನ ತಾಳ್ಮೆ ದೊಡ್ಡದು, ಜೊತೆಗೆ ಅವನ ಭಾರವೂ ಹೆಚ್ಚುತ್ತಿದೆ.

**ಐನೂರು ಕೋಟಿ ಭೂ ಜೀವಿಗಳ ನ್ಯಗ್ರೋಧ ಸಂತಾನದಿಂದ,**
**ಹಸಿರು ಕಾಡನ್ನು ಕಬಳಿಸುವ ಮಾನವ ಕಾಂತಾರದಿಂದ !**

ಆದರೆ ಅವನ ನೆನಪೇ ನಮಗಿಲ್ಲವಾಗಿದೆ. ಸೋದರರಂತಿರಬೇಕಾದ ನಮ್ಮಲ್ಲಿ ಸದಾ ಸರ್ಪಮತ್ಸರ ತಾಂಡವವಾಡುತ್ತಿದೆ.

**ಹೀಗಾದರೆ, ಹೇಗೆ ತಾನೆ ತರಬಹುದು ಅಮೃತವ ಗರುಡ ?**
**ನೆಲ ಹಡೆದೀತು ಹೇಗೆ ನಂದನದ ಹಾಡ ?**

ಆದ್ದರಿಂದಲೇ ನಮ್ಮ ನಮ್ಮೊಳಗೆ ಏಕೆ ಈ ದ್ವೇಷ ? ಎಂಬ ಶೇಷ ಪ್ರಶ್ನೆಗೆ ಉತ್ತರ ಕಂಡುಕೊಳ್ಳಲೇ ಬೇಕಾಗಿದೆ. ಇಲ್ಲದಿದ್ದಲ್ಲಿ ಭೂಮಿ ನಿಶ್ಯೇಷವಾಗಿ ಆಕಾಶ ಮಾತ್ರ ಉಳಿಯುತ್ತದೆ ಎಂಬ ಅಘಾತಕಾರಿ ವಿಷಯದೊಂದಿಗೆ ಕೊನೆಗೊಳ್ಳುವ ಕವಿತೆಯು ಪರಿಣಾಮಕಾರಿಯಾಗಿ ಮೂಡಿ ಬಂದಿದೆ.

**'ಜಾಗತಿಕ ಪ್ರಜ್ಞೆ'** ಕವನದಲ್ಲಿ ಸಿ.ಪಿ.ಕೆ ಯವರು ಹಾಸ್ಯ, ವಿಡಂಬನೆಯ ಮೂಲಕ ಸಮಾಜ ಸಾಗುತ್ತಿರುವ ದಿಕ್ಕನ್ನು ತಿಳಿಸಿದ್ದಾರೆ.

ಹಲವು ಬಗೆಯ ಪ್ರಜ್ಞೆಗಳ ಹೆಸರನ್ನು ಕೇಳುತ್ತಿದ್ದೇವೆ, ಅವುಗಳಲ್ಲಿ ಎಲ್ಲರಲ್ಲೂ ಇರುವ **'ಜಾಗತಿಕೆ'** ಪ್ರಜ್ಞೆಯು ಒಂದು.

**ಎಲ್ಲರಿಗಿಂತ ಮುಂಚೆ ಜಾಗವೊಂದನ್ನು ಗಿಟ್ಟಿಸಿ**
**ಅಲ್ಲಿ ಕುಂಡಿಯೂರಬೇಕೆಂಬ ಪ್ರಜ್ಞೆಯೇ**
**ಜಾಗತಿಕ ಪ್ರಜ್ಞೆ! –**

ಎಂದು ಅರ್ಥೈಸಿರುವ ರೀತಿ ಹಾಸ್ಯಮಯವಾಗಿದೆ.

**'ಜಾಗಕ್ಕಾಗಿ'** ಎಷ್ಟೆಲ್ಲ ಹೋರಾಟ ನಡೆಯುತ್ತಿದೆ, ಅದರ ವ್ಯಾಮೋಹ ಎಷ್ಟಿದೆ ಎಂಬುದನ್ನು ಸಹ ತಿಳಿಸಿದ್ದಾರೆ. ಮೊದಲೇ ಜಾಗ ಕಾದಿರಿಸುವುದು, ಹೋರಾಟದಿಂದ ಪಡೆಯುವುದು, ಕುಳಿತವರನ್ನು ಎಬ್ಬಿಸಿ ಕುಳಿತು ಕೊಳ್ಳುವುದು ಹೀಗೆ ನಾನಾ ಮುಖ. ನರ್ಸರಿ ಶಾಲೆಯಿಂದ ಹಿಡಿದು ರಾಜಕೀಯ ರಂಗದವರೆಗೂ ಇದರ ವ್ಯಾಪ್ತಿಯಿದೆ.

**ನೆಲವೊ ಕುರ್ಚಿಯೊ ಪೀಠವೋ ಗದ್ದುಗೆಯೊ –**
**ಬೇಕೆ ಬೇಕು ಒಂದು ಜಾಗದ ಪ್ರಾಪ್ತಿ !**
**ಹೇಗಾದರೂ ಸರಿಯೆ ಅದನ್ನು ಗಿಟ್ಟಿಸಬೇಕು.**
**ರಾಜಕೀಯಸ್ಥರಲ್ಲಿ ಈ ಪ್ರಜ್ಞೆ ಬಹು ಪ್ರಖರ ;**
**ಈಗೀಗ ಜಗದ್ಗುರುಗಳಿಗೂ ಇದು ಅಂಟುತ್ತಿದೆ.**
**ಸಹಜ.**

ರಾಜಕೀಯ ಅಥವಾ ಇತರ ರಂಗದಲ್ಲಿ ಇದಕ್ಕಾಗಿ ಹಾತೊರೆಯುವುದು ಮಾಮೂಲು. ಆದರೆ ಇದರ ಮೋಹ ಎಷ್ಟಿದೆಯೆಂದರೆ ಎಲ್ಲವನ್ನು ತ್ಯಜಿಸಿ ವಿರಾಗಿಗಳಾದ ಜಗದ್ಗುರುಗಳು ಸಹ ಜಾಗಕ್ಕಾಗಿ ಹೋರಾಡುತ್ತಿರವುದು ಸೋಜಿಗದ ಸಂಗತಿಯಾಗಿದೆ.

ಸತ್ಯಕ್ಕೆ ಜಯ ಎಂಬ ಮಾತು ಜನಜನಿತವಾಗಿದೆ. ಆದರೆ ಸತ್ಯಕ್ಕೆ ವಿರುದ್ಧವಾದುದು ಸತ್ಯವಾದಾಗ ಅದೇ ದಿಟವಾಗುವ, ಮಾನ್ಯತೆ ಪಡೆಯುವ ವಿಪರ್ಯಾಸ ಉಂಟಾಗುತ್ತದೆ ಎಂಬುದನ್ನು **'ನೀವೆ ನಮಗೆ ದಿಕ್ಕು'** ಕವನ ಸಂಕಲನದ **'ಸತ್ಯ'** ಕವಿತೆಯಲ್ಲಿ ನಿರೂಪಿಸಿದ್ದಾರೆ.

ನರಿ ಮತ್ತು ಹುಲಿಗಳದ್ದೇ ಕಾಲವಾಗಿದೆ. ಇಲ್ಲಿ ನರಿ ಮತ್ತು ಹುಲಿಗಳು ಮೋಸ ಮತ್ತು ಅಧಿಕಾರದ ದರ್ಪಕ್ಕೆ ಸಾಂಕೇತಿಕವಾಗಿವೆ.

**ಆದರೂ ನಂಬಿ ಕಾದಿದ್ದೇವೆ :**
**ಹುಲ್ಲೆಗೂ ಒಂದು ಕಾಲ ಬಂದೀತು ;**
**ಅಷ್ಟೇಕೆ, ಹುಲ್ಲಿಗೂ ಒಂದು ಕಾಲ**
**ಬಂದೀತು.**

ಆದರೆ ನರಿ, ಹುಲಿಗಳ ಕಾಲ ಹೋಗಿ ಹುಲ್ಲೆಯ ಕಾಲ ಬರುವುದೇ? ನರಿ ಹುಲಿಗಳು ಅದಕ್ಕೆ ಅವಕಾಶ ಮಾಡಿಕೊಡುತ್ತವೆಯೇ ಮೋಸಗಾರರಿಂದ ಅಧಿಕಾರದ ಆಮಿಷವುಳ್ಳವರಿಂದ ಸಮಾಜ ಮುಕ್ತವಾಗಿ ಸಾಧು ವ್ಯಕ್ತಿಗಳಿಗೆ ಕಾಲ ಬರುವುದೇ ? ನಂಬಿಕೆ ಸತ್ಯವಾಗುವುದೇ ?

**ಬರದಿದ್ದರೇನಂತೆ ?**
**ಹುಲಿ, ನರಿಗಳಿಗೇ ಎಲ್ಲ ಕಾಲ**
**ಎಂಬ ಸನಾತನ ಸತ್ಯ ಉಳಿಯುತ್ತದೆ :**
**ಸತ್ಯಮೇವ ಜಯತೇ !**

**'ಕ್ಷಯ ವಸ್ತ್ರ'** ಕವನವು ಸಮಾಜ ಮತ್ತು ಸಂಸ್ಕೃತಿಯ ಅಧಃಪತನವನ್ನು ಕಟ್ಟಿಕೊಟ್ಟಿದೆ. ಭಾರತೀಯ ಸಂಸ್ಕೃತಿಯ ಪ್ರತೀಕ ಹೆಣ್ಣು. ಆದರೆ ಆಕೆಯಲ್ಲಾಗುತ್ತಿರುವ ಬದಲಾವಣೆ ಆ ಮಾತನ್ನು ಸುಳ್ಳಾಗಿಸುತ್ತಿದೆ.

ಅಂದು ದುಶ್ಯಾಸನ ದ್ರೌಪದಿಯ ಸೀರೆ ಸೆಳೆದಾಗ ಆಕೆಯ ಮೊರೆಕೇಳಿ ಶ್ರೀ ಕೃಷ್ಣ ವಸ್ತ್ರ ನೀಡಿ ಮಾನ ಉಳಿಸಿದ. ಆದರೆ ಇಂದು

**ತಾವಾಗಿಯೇ ಬೆತ್ತಲಾಗಬಯಸುವವರನ್ನು**
**ಯಾವ ಕೃಷ್ಣ ತಾನೆ ಕಾಯಬಹುದು ?**
**ಅವನೀಗ ದನ ಕಾಯುವುದಕ್ಕೆ ಲಾಯಕ್ಕು !** –

ಎಂಬ ಸ್ಥಿತಿ ಉಂಟಾಗಿದೆ. ಬಟ್ಟೆ ಹಾಕಿದರೆ ಮೈ ಭಾರವಾಗುತ್ತದೆ ಎಂದು ಅದನ್ನು ಕ್ಷಯ ಮಾಡಿಕೊಳ್ಳುತ್ತಿರುವ ರೀತಿಗೆ ಬೆರಗಾಗಿ ಅದನ್ನು 'ಪರಮಾತ್ಮನ ಲೀಲೆ' ಎಂದು ಹೇಳುತ್ತಾ ಒಂದು ಬಗೆಯ ವಿಷಾದ ವ್ಯಕ್ತಪಡಿಸಿದ್ದಾರೆ.

ಹೀಗೆ ಸಮಾಜಮುಖಿ ಧೋರಣೆಗಳನ್ನು ಒಳಗೊಂಡಿರುವ ಸಿ.ಪಿ.ಕೆ ಅವರ ಸಾಮಾಜಿಕ ಕವನಗಳಲ್ಲಿ ಮನುಷ್ಯನ ಸಂಬಂಧ, ಸಂಕೀರ್ಣತೆಗಳನ್ನು ತಿಳಿಸುವುದರ ಜೊತೆಗೆ ಟೀಕೆ, ಖಂಡನೆ ವಿಡಂಬನೆಗಳನ್ನು ಸಹ ಕಾಣಬಹುದು. ಮೇಲೆ ವಿಶ್ಲೇಷಿಸಿರುವ ಕವಿತೆಗಳಲ್ಲದೆ ಇನ್ನೂ ಅನೇಕ ಕವಿತೆಗಳಲ್ಲಿ ಸಾಮಾಜಿಕ ಅಂಶಗಳು ವ್ಯಕ್ತವಾಗಿರುವುದನ್ನು ಗಮನಿಸಬಹುದಾಗಿದೆ.

**೪.೪. ನಾಡು–ನುಡಿ ಚಿಂತನೆ :**

ಕನ್ನಡ ಸಾಹಿತ್ಯ ಚರಿತ್ರೆಯ ಆರಂಭದಿಂದ ಇಂದಿನವರೆಗಿನ ಎಲ್ಲಾ ಕವಿಗಳ ಕೃತಿಗಳಲ್ಲಿ ನಾಡು ಮತ್ತು ನುಡಿಯ ಬಗೆಗಿನ ಪ್ರೀತಿ, ಅಭಿಮಾನ ವ್ಯಕ್ತವಾಗಿರುವುದನ್ನು ಗಮನಿಸಿದರೆ ಹೆಮ್ಮೆ ಎನಿಸುತ್ತದೆ. ಓದುಗರಲ್ಲೂ ಪ್ರೀತಿ, ಅಭಿಮಾನ ಮೂಡುತ್ತದೆ. ಭಾಷೆಯ ಮಹತ್ವ, ಅನ್ಯಭಾಷೆಯ ಹಾವಳಿಯ ಆತಂಕ, ನಾಡಿನ ಸಿರಿಸಂಪತ್ತು, ವೈಭವ ಎಲ್ಲವನ್ನು ಸಾಹಿತ್ಯದಲ್ಲಿ ಗುರುತಿಸಬಹುದು. "ಭಾಷೆಯೆಂದರೆ ಕೇವಲ ಶಬ್ದಗಳಲ್ಲ, ಅಕ್ಷರಗಳ–ಪದಗಳ ಮಂದೆಯಲ್ಲ ಅದು ಒಂದು ಜೀವಂತ ಸಮುದಾಯದ ಚೈತನ್ಯ. ಆ ಬದುಕಿನ ಅನನ್ಯತೆಗಳನ್ನು ಅಭಿವ್ಯಕ್ತಿಗೆ ಗುರಿಮಾಡಿ, ಸೃಷ್ಟಿಕ್ರಿಯೆಗೆ ಒಳಪಡಿಸುವ ಶಕ್ತಿ ಭಾಷೆಗಿರುತ್ತದೆ."[೫]

'ಸಿರಿಗನ್ನಡಂ ಗೆಲ್ಗೆ, ಸಿರಿಗನ್ನಡಂ ಬಾಳ್ಗೆ' ಎಂಬ ಉಕ್ತಿಯು ಕನ್ನಡ ಭಾಷೆಯ ಮಹತ್ವವನ್ನು ಸಾರುತ್ತದೆ. ಕುವೆಂಪುರವರು "ಜೈ ಭಾರತ ಜನನಿಯ ತನುಜಾತೆ, ಜಯಹೇ ಕರ್ನಾಟಕ ಮಾತೆ"[೬] ಎಂದು ಹೇಳುವ ಮೂಲಕ ಕನ್ನಡಾಂಬೆಯನ್ನು ಭಾರತ ಮಾತೆಯ ಪುತ್ರಿ ಎಂದಿದ್ದಾರೆ. ಕನ್ನಡ ನಾಡು ಮತ್ತು ನುಡಿಯು ವೈಭವಯುತವಾದುದು. ಆದರೆ ಇಂದು ಆ ವೈಭವ ಅನ್ಯರ ಪ್ರಭಾವ ಆಕ್ರಮಣದಿಂದ ಮರೆಯಾಗುತ್ತಿರುವುದು ಆಘಾತಕಾರಿ ವಿಷಯವಾಗಿದ್ದು ಕನ್ನಡ ಭಾಷೆ ಮತ್ತು ಕನ್ನಡ ನಾಡನ್ನು ಪಾರು ಮಾಡಬೇಕಾದ ಅನಿವಾರ್ಯತೆ ಉಂಟಾಗಿದೆ. ಹೀಗೆ ನಾಡು–ನುಡಿಯ ಬಗೆಗಿನ ಪ್ರೀತಿ, ಕಾಳಜಿ ಆತಂಕಗಳು ಕನ್ನಡ ಕಾವ್ಯದಲ್ಲಿ ವ್ಯಕ್ತವಾಗಿರುವುದು ಗಮನಾರ್ಹವಾಗಿದೆ.

ಸಿ.ಪಿ.ಕೆ ಅವರ ಕವನಗಳನ್ನು ಅಧ್ಯಯನ ಮಾಡುವಾಗ ಅವುಗಳಲ್ಲಿ ನಾಡು ನುಡಿಗೆ ಸಂಬಂಧಪಟ್ಟ ಅನೇಕ ಕವನಗಳನ್ನು ಗುರುತಿಸಬಹುದು. ಅವರ ಕವನಗಳಲ್ಲಿ ನಾಡು ನುಡಿಯ ಬಗ್ಗೆ ಪ್ರೀತಿ, ಅಭಿಮಾನ, ಕಾಳಜಿ, ಎಚ್ಚರ, ಆತಂಕ, ಗೌರವ ಮುಂತಾದ ಅಂಶಗಳು ವ್ಯಕ್ತವಾಗಿರುವುದನ್ನು ಗುರುತಿಸಬಹುದಾಗಿದೆ.

**'ಅನಂತ–ಪೃಥ್ವೀ'** ಕವನ ಸಂಕಲನದ **'ತಾಯ ವೈಭವದ ನೆನಪು'** ಕವನದಲ್ಲಿ ಕನ್ನಡ ತಾಯಿಯ ವೈಭವವನ್ನು ಅದ್ಭುತವಾಗಿ ಕಣ್‌ಕಟ್ಟುವಂತೆ ಚಿತ್ರಿಸಿದ್ದಾರೆ. ಈ ಕವನವು ಕನ್ನಡ ನಾಡು ನುಡಿಯ ಮೇಲೆ ಕವಿಗಿರುವ ಉತ್ಕಟ ಅಭಿಮಾನವನ್ನು ಪ್ರಕಟಿಸುತ್ತಿದೆ. ಅಷ್ಟೇ ಅಲ್ಲ ಕನ್ನಡ ತಾಯಿಗೆ ಬರುತ್ತಿರುವ ಕುತ್ತನ್ನು ನೆನೆದು ಆತಂಕಗೊಂಡು ಅದರ ರಕ್ಷಣೆಗೆ ಪಣ ತೊಡಬೇಕೆಂಬ ಕರೆ ನೀಡಿದ್ದಾರೆ.

ಭಾಷೆ ಮತ್ತು ನೆಲದ ಬಗ್ಗೆ ಅಭಿಮಾನ ಕಳೆದುಕೊಳ್ಳುತ್ತಿರುವ ಇಂದಿನ ಯುವ ಜನತೆ ಈ ಕವನವನ್ನು ಓದಿದಾಗ ಪುಳಕಿತರಾಗಿ ಅದರ ದರ್ಶನವನ್ನು ಕಾಣುವ, ಕಂಡು ತಣಿಯುವ, ತಣಿದು ಉಳಿಸಿಕೊಳ್ಳುವ ಪ್ರತಿಜ್ಞೆ ಕೈಗೊಳ್ಳುವಷ್ಟು ಪ್ರೇರಕವಾಗಿದೆ. ಪಂಪನ ಪ್ರಭಾವವು ಇಲ್ಲಿರುವುದನ್ನು ಗಮನಿಸಬಹುದು.

ಕರ್ನಾಟಕ ಮಾತೆಯು ಭಾರತ ಮಾತೆಯ ಮಗಳು ಆ ತಾಯಿಯನ್ನು ವರುಷಕ್ಕೊಮ್ಮೆ ತಾಯಿಯ ಉತ್ಸವದ ದಿನದಂದು ಮಾತ್ರ ನೆನೆದು ಉಳಿದಂತೆ ಆಕೆಯನ್ನು ಮರೆಯುತ್ತಿದ್ದೇವೆ. ಅದಕ್ಕಾಗಿ ಕ್ಷಮೆ ಕೇಳುತ್ತಾರೆ. ಕನ್ನಡ ತಾಯಿಯ ವೈಭವ ನೋಡಲು ಕಣ್ಣು ಸಾಲದು.

**ತಾಯೆ ನಿನ್ನೀ ಸಿರಿಗೆ ಸಂಪದಕೆ ಎಣೆಯುಂಟೆ? ಸಹ್ಯಾದ್ರಿ ನಿನ್ನ ಪೀಠ!**
**ಪಡುಗಡಲು ನಿನ್ನ ಕನ್ನಡಿಯಮ್ಮ; ಮಲೆನಾಡು ಕೊಡಗು ನಂದನದ ನೋಟ ;**
**ಭೋರ್ಗರೆವ ಜೋಗದಲಿ ನಿನ್ನ ಮೈಜಳಕ; ಬೃಂದಾವನವೇ ಹಣೆಗೆ ತಿಲಕ!**
**ಸಾಮ್ರಾಜ್ಞೆ, ನಿನ್ನ ಕನ್ನಡರಾಜ್ಯ ಭೂಮಿಯಲಿ ಶೋಭಿಸುವ ದಿವ್ಯ ಅಳಕಾ!**

ಮುಂದಿನ ಪದ್ಯಗಳಲ್ಲಿ ಕನ್ನಡ ನಾಡಿನ ಭವ್ಯ, ವೀರ ಪರಂಪರೆಯ ಚಿತ್ರಣ ನೀಡುತ್ತಾರೆ. ಕನ್ನಡ ನಾಡಿನ ಗಡಿ, ಆಳಿ ಅಮರವಾದ ಸಾಮ್ರಾಜ್ಯಗಳು, ಭಾರತೀಯ ನಾರಿಯರು, ವಿಭೂತಿ ಪುರುಷರು, ಕಲೆಯ ಬೀಡುಗಳು, ಸಾಹಿತ್ಯ ಸಾಮ್ರಾಟರು, ವಚನಕಾರರು ಮುಂತಾದವರ ನೆನಪು ಕಟ್ಟಿಕೊಡುತ್ತಾರೆ. ಅಷ್ಟೆ ಅಲ್ಲದೇ ಕನ್ನಡ ನಾಡು ಧರ್ಮ ಸಹಿಷ್ಣುತೆಯ ಬೀಡಾಗಿದೆ ಎಂಬುದನ್ನು ಕೆಳಗಿನ ಸಾಲಿನಲ್ಲಿ ಕಟ್ಟಿಕೊಟ್ಟಿದ್ದಾರೆ.

**ಹಲವು ಮತ ಧರ್ಮಗಳ ತವರು ನಿನ್ನೀ ನಾಡು, ಇಲ್ಲಿಲ್ಲ ಧರ್ಮವೈರ !**
**ಬುದ್ಧಜಿನ ವಿಷ್ಣು ಶಿವರೆಲ್ಲ ಒಂದೇಯೆಂಬ ತಿಳಿವಳಿಕೆ ನಿನ್ನಸಾರ !**
**ದೇವರೆನ್ನುವ ತತ್ವ ಒಂದೆ, ಹೆಸರುಗಳದಕೆ ಹಲವು, ಹಲವುಂಟು ದಾರಿ–**
**ಎಂಬ ಸಂದೇಶವನು ಸಾರುತಿದೆ ಭಾರತಕೆ ಬೇಲೂರು ಶಿಲೆಯ ಬೇರಿ:**

ಗತವೈಭವದ ಸವಿ ನೆನಪಿನ ಜೊತೆಗೆ ಎಚ್ಚರಿಕೆಯನ್ನು ಸಹ ನೀಡಿದ್ದಾರೆ.

**ಬರಿಯ ಹಳೆನೆನಪುಗಳನೆಣಿಸಿ ಸಂತಸಬಡುವ ಕಡುಲೋಭಿಯಾಗದಂತೆ**
**ನಿನ್ನವರನೆಚ್ಚರಿಸು–ಗತವೈಭವವ ನೆಮ್ಮಿ ಮುಂದಿನದ ಮರೆಯದಂತೆ!**
**ನಿನ್ನ ಹಿಂದಿನದೆಲ್ಲ ಹೊನ್ನಿನಂಕುಶವಾಗಿ ತಿವಿದು ಮುನ್ನಡೆಸಬೇಕು;**
**ಹೊಸಹೊಸತು ಶಿಖರಗಳನೇರಿ ನಿನ್ನೀ ನಾಡು ಜಗದ ಬೆಳಕಾಗಬೇಕು!**

ಕನ್ನಡ ನಾಡನ್ನು ಅನ್ಯರು ಆಕ್ರಮಿಸಿ ಕಬಳಿಸುವ ಪ್ರಯತ್ನ ಮಾಡುತ್ತಿದ್ದಾರೆ. ಕನ್ನಡ ತಾಯಿ ಆಪತ್ತಿಗೊಳಗಾಗಿದ್ದಾಳೆ, ಅವಳ ರಕ್ಷಣೆಗೆ ನಾವು ಕಂಕಣಬದ್ಧರಾಗಿ ನಿಲ್ಲಬೇಕು. ಅಷ್ಟೇ ಅಲ್ಲ "ಭಾರತದ ಗೆಲುವಿನಲಿ ನಿನ್ನ ಗೆಲುವನು ಕಾಣು ಮುತ್ತೈದೆ ನೀನನಂತ" ಎಂಬ ಸಾಲು ಐಕ್ಯತೆ ಮತ್ತು ಸೌಹಾರ್ದ ಬದುಕಿನ ಮಹತ್ವ ತಿಳಿಸುತ್ತದೆ. ಅಜ್ಜಿಯ ಗೆಲುವು ಮಗಳ ಗೆಲುವಾಗಿ ಮೊಮ್ಮಕ್ಕಳ ಒಳಿತಿಗೆ ದಾರಿ ದೀಪವಾಬೇಕಾಗಿದೆ.

ಕವಿತೆಯ ಕಡೆಯ ಪದ್ಯ ಪಂಪನ "ಚಾಗದ ಭೋಗದಕ್ಕರದ......."[೭] ಪದ್ಯವನ್ನು ನೆನಪಿಗೆ ತರುತ್ತದೆ. ಪಂಪನಂತೆ ಕವಿ ಪ್ರಾರ್ಥಿಸಿದ್ದಾರೆ.

**ಕಡೆಯ ಪ್ರಾರ್ಥನೆಯಮ್ಮ-ಬೇಡುವೆನು ಪಂಪನೊಲು: ಭವಭವಸಹಸ್ರದಲ್ಲಿ**
**ನರನಾಗಿ, ಮರಿದುಂಬಿಯಾಗಿ, ಕೋಗಿಲೆಯಾಗಿ ಬರಲು ಕರ್ಣಾಟಕದಲಿ !**
**ಕನ್ನಡದ ನೆಲವಿರಲಿ, ಜಲವಿರಲಿ, ಚೆಲುವಿರಲಿ, ಕನ್ನಡದ ಗಾಳಿಯಿರಲಿ-**
**ಅನ್ಯವನು ಕಾಮಿಸೆನು, ಆಶೀರ್ವದಿಸು ತಾಯೆ, ಕನ್ನಡದ ಭುವನೇಶ್ವರಿ !**

ಜನ್ಮಜನ್ಮಾಂತರಕ್ಕೂ ಕನ್ನಡ ನಾಡಿನಲ್ಲೇ ಹುಟ್ಟಬೇಕೆಂಬ ಹೆಬ್ಬಯಕೆ, ಕನ್ನಡದ ನೆಲ, ಜಲ, ಗಾಳಿ, ಚೆಲುವನ್ನು ಸವಿಯುವ ಮೋಹ ಅಭಿಮಾನದ ಪರಾಕಾಷ್ಠೆಯನ್ನು ಬಿಂಬಿಸುವಂತಿದೆ.

**'ಅನಂತ-ಪೃಥ್ವೀ'** ಕವನ ಸಂಕಲನದ **'ದೇಶದೇವಿಯ ಕರೆ'** ಕವನದಲ್ಲಿ ಕವಿ ಭಾರತ ಮಾತೆಗೆ ಬಂದಿರುವ ದುರ್ದಸೆಯನ್ನು ಹೋಗಲಾಡಿಸಲು ಸಜ್ಜಾಗಬೇಕು, ಹೇಡಿಗಳಂತೆ ತಲೆಮರೆಸಿಕೊಳ್ಳದೆ ವೀರರಂತೆ ಕೆರಳಿನಿಂತು ಹೋರಾಟಕ್ಕೆ ಮುಂದಾಗಿ ಎಂಬುದನ್ನು ಆವೇಶಭರಿತರಾಗಿ ಕಟ್ಟಿಕೊಟ್ಟಿದ್ದಾರೆ.

**ಏಳಿರಿ ಭಾರತ ಮಾತೆಯ ಮಕ್ಕಳೆ**
**ನವನರಕಾಸುರಮರ್ದನಕೆ :**
**ಕೈದುವ ಕೊಂಡೆದ್ದೇಳಿರಿ, ಕೆರಳಿರಿ**
**ಬಂದೀ ಭಾರತದುರ್ದಿನಕೆ !**

ತಾಯಿಗೆ ಒದಗಿರುವ ದುರ್ದಿನವನ್ನು ಕಳೆಯಲು ಮಕ್ಕಳು ಸಜ್ಜಾಗಬೇಕೆಂಬ ಎಚ್ಚರಿಕೆಯ ಘಂಟೆಯನ್ನಯ ಕವಿತೆಯ ಆರಂಭದಲ್ಲೇ ಭಾರಿಸಿದ್ದಾರೆ.

**ಶಾಂತಿ ತಪದ ತವರ್ಮನೆ ಹಿಮಗಿರಿ**
**ನಡುಗಿದೆ ಸಮರದ ಆರ್ಭಟಕೆ ;**
**ಮೌನಸಮಾಧಿಯ ತುಷಾರಧವಳತೆ**
**ರಕ್ತಪ್ಲಾವಿತವಾಗುತಿದೆ !** –

ಎಂಬ ಸಾಲುಗಳು ಯುದ್ಧದ ಭೀಕರ ಚಿತ್ರಣ ಮತ್ತು ಪರಿಣಾಮವನ್ನು ತಿಳಿಸುತ್ತವೆ.

ನಮ್ಮದು ಕಲಿಗಳ ನಾಡು, ಆಂಗ್ಲರನ್ನು ಮಣಿಸಿ ಮೂಡಿದ ದೇಶ, ನಮ್ಮನ್ನು ಕಂಡು ಇಡೀ ಲೋಕವೇ ಬೆರಗುಗಣ್ಣಿನಿಂದ ನೋಡುತ್ತಿದೆ. ಗಾಂಧೀಜಿ ನಮಗೆ ಸ್ವಾತಂತ್ರ್ಯ ಗಳಿಸಿಕೊಟ್ಟರು. ಆದರೆ ಇಂದು ಅವರ ಆತ್ಮ ಆತಂಕಕ್ಕೊಳಗಾಗಿದೆ.-

**ಸ್ವಾತಂತ್ರ್ಯವ ನಾವ್ ರಕ್ಷಿಪೆವೆಂತೋ**
**ಎನ್ನುತ ದಿವದಲಿ ಗಾಂಧೀಜಿ**
**ಎವೆಯಿಕ್ಕದೆ ನಿರುಕಿಸುವರು; ಹೇಡಿಯ**
**ಕಂಡರೆ ಮರುಗದೆ ಅವರಾತ್ಮ ?**

ನಮಗೆ ಸ್ವಾತಂತ್ರ್ಯ ಸುಲಭವಾಗಿ ದೊರೆತಿಲ್ಲ. ಅದಕ್ಕಾಗಿ ಅಪಾರ ಬೆಲೆ ತೆತ್ತಿದ್ದೇವೆ. ಅದನ್ನು ಉಳಿಸಿಕೊಳ್ಳುವುದು ಪ್ರತಿಯೊಬ್ಬ ಭಾರತೀಯನ ಕರ್ತವ್ಯವಾಗಿದೆ. ಆದರೆ ಅದನ್ನು ಮರೆತು ನಮ್ಮ ನಮ್ಮಲ್ಲೇ ದ್ವೇಷ, ಅಸೂಯೆಗಳು ಬೆಳೆದು 'ಮನೆಕಲಹ' ದಂಥ ನಾಚಿಕೆಗೇಡಿನ ಕೃತ್ಯಗಳು ಜರುಗುತ್ತಿವೆ. ಹೊಟ್ಟೆಕಿಚ್ಚನ್ನು ಮೊದಲು ತೊಲಗಿಸಿ ನವಭಾರತದ ಸುಖಕ್ಕಾಗಿ ದುಡಿಯಬೇಕಾಗಿದೆ.

**ಹೊಲಗದ್ದೆಗಳಲಿ ತುಂಬಲಿ ಅನ್ನ,**
**ಕರೆಯಲಿ ಯಂತ್ರದ ಸುರಧೇನು !**
**ಮಾಡುವೆಲ್ಲ ಕಾಯಕವೇ ಕಾಳಗ,**
**ತಾಯ್ನಾಡಕ್ಕರೆಯೊಂದಿರಲು.**

ತಾಯಿನಾಡಿನ ರಕ್ಷಣೆ ಬಹಳ ಮುಖ್ಯ. ಆಗ ಮಾತ್ರ ಸುಖ, ಸಮೃದ್ಧಿ ಶಾಂತಿ ನೆಲೆಸಲು ಸಾಧ್ಯ. ಅದರ ರಕ್ಷಣೆಯ ಹೊಣೆ ನಮ್ಮದು ಎನ್ನುತ್ತಾ 'ನವನರಕಾಸುರಮರ್ದನಕೆ' ಎದ್ದೇಳಿ ಹಗೆಯನು ಬಡಿದು ಭಾರತಕ್ಕೆ ಬಂದಿರುವ ದುರ್ದಿನವನ್ನು ತೊಲಗಿಸಿ ಭಾರತ ಮಾತೆಯ ಮನದಲ್ಲಿ ಶಾಂತಿ ನೆಮ್ಮದಿ ನೆಲೆಸುವಂತೆ ಮಾಡೋಣ ಎಂಬ ಕರೆ ನೀಡುವ ಮೂಲಕ ಭಾರತ ಮಾತೆಯನ್ನು ರಕ್ಷಿಸುವ ಹಂಬಲ ವ್ಯಕ್ತಪಡಿಸಿದ್ದಾರೆ.

**'ಅನಂತ-ಪೃಥ್ವೀ'** ಕವನ ಸಂಕಲನದ **'ಮೈಸೂರು'** ಕವನವು ಸಾಂಸ್ಕೃತಿಕ ನಗರಿ ಎಂದೇ ಖ್ಯಾತವಾಗಿರುವ ಮೈಸೂರಿನ ಭವ್ಯ ಚಿತ್ರಣವನ್ನು ಕಟ್ಟಿಕೊಡುವ ಮೂಲಕ ನಾಡಿನ ಸೊಬಗು ಮತ್ತು ಸಿರಿಯ ವೈಭವವನ್ನು ವರ್ಣಿಸಿದ್ದಾರೆ.

**ಇದು ನಗರ, ದಿಟ. ಬರಿಯ ನಗರವಾದೊಡೆ ಇದಕೆ**
**ಕವಿತೆ ಹಡೆಯುವ ಕಸುವೆ ? ಅತ್ತ ಕಡೆ ಗಿರಿಕಲಶ,**
**ಇತ್ತ ಕಡೆ ಕೆರೆಯ ಕನ್ನಡಿ, ನಡುವೆ ನಿಂತಿಹುದು**
**ಮರಮರದ ಹೊದರಿನಲಿ ಮಂಗಳಾಶ್ರಮದಂತೆ !**

ಪ್ರಕೃತಿಯ ವೈಭವವೇ ಮೈವೆತ್ತಂತೆ ಮೈಸೂರು ನಿಂತಿದೆ. ವಿಶ್ವೇಶ್ವರಯ್ಯನವರ ಕೂಸಾದ ಕನ್ನಂಬಾಡಿ ಮತ್ತು ಮಹಿಷಾಸುರ ಮರ್ದಿನಿ ದುರ್ಗೆ, ಇವರ ನಡುವಿನ ಮಂಗಳ ಆಶ್ರಮವಾಗಿದೆ. ವರ್ಷಕ್ಕೊಮ್ಮೆ ನಡೆಯುವ ದಸರಾ ಉತ್ಸವವನ್ನು ಯಕ್ಷಲೋಕಕ್ಕೆ ಹೋಲಿಸಿರುವುದು ಅದ್ಭುದವೆನಿಸುತ್ತದೆ. ಶಿವದೊಡನೆ ಸೌಂದರ್ಯ ಕೂಡಿಯಾಡುತ್ತಿದೆ. "ಗತ ವೈಭವದ ಹೊಗರು ಹಾಯುತಿದೆ ವರ್ತಮಾನದ ಬೆಡಗು ಬಿಂಕದೊಳು" ಎಂಬ ಸಾಲು ಮನುಷ್ಯ ಎಷ್ಟೇ ಮುಂದುವರೆದರೂ ಗತವೈಭವದ ಕಾಂತಿಯ ಮಹತ್ವ ಎಷ್ಟೆಂಬುದನ್ನು ತಿಳಿಸುತ್ತದೆ.

**ಅಚ್ಚಗನ್ನಡದ ಮೆಚ್ಚಿನ ಬೀಡು, ಹೃತ್ಕಲಶ,**
**ಆಧುನಿಕ ವಾಲ್ಮೀಕಿ ಗಂಗೋತ್ರಿ ಸಂಭೂತ**
**ಕಲ್ಯಾಣನಗರಿ ಜಯಿಸಲಿ, ನಮ್ಮ ನಮನವದೋ!**

ಇಂಥ ಸೌಂದರ್ಯ, ಬೆಡಗು, ವೈಭವ ಒಳಗೊಂಡಿರುವ ಕಲ್ಯಾಣ ನಗರಿಗೆ ಜಯವಾಗಲಿ ಎನ್ನುತ್ತಾ ನಮನ ಸಲ್ಲಿಸಿದ್ದಾರೆ. ಅದನ್ನು ಹಾಗೆಯೇ ಉಳಿಸುವ ಹೊಣೆಯೂ ನಮ್ಮದೇ ಆಗಿದೆ.

**'ಪ್ರಕೃತಿ'** ಕವನ ಸಂಕಲನದ **'ಇತಿಹಾಸ'** ಕವನವು ಇತಿಹಾಸದ ಗತವೈಭವದ ಜೊತೆಗೆ ಅದರೊಳಗಿರುವ ಕೆಡುಕಿನ ಅಂಶವನ್ನು ಎತ್ತಿ ಹೇಳಿದ್ದಾರೆ. ಐಕ್ಯತೆಯಿಂದಲೇ ದೇಶದ ಉದ್ಧಾರ ಎಂಬುದನ್ನು ತಿಳಿಸಿದ್ದಾರೆ.

ಇತಿಹಾಸ ಎಂದ ಕೂಡಲೇ ವೈಭವದ ನೆನಪು ಬರುತ್ತದೆ. ಆದರೆ ಅದರಲ್ಲಿರುವ ಕೆಡುಕು ಅಪಾರ, ಅದರ ಭಾರದಿಂದಾಗಿ ನಮ್ಮ ನಾಡು ಬಾಗಿ ಹೋಗಿದೆ. ಅದರಲ್ಲಿ ರೋಗ ರುಜಿನಗಳ ಬೀಜಗಳಿವೆ. ಅವುಗಳನ್ನು ಮೊಳಕೆಯೊಡೆಯಲು ಬಿಡಬಾರದು.

**ಭೂತಾಕ್ರಾಂತರು ನಾವು ಅನಾದಿಯ**
**ವ್ಯಾಧಿಗಳೆಮ್ಮನು ಬಾಧಿಸಿವೆ–**
**ಚಿಕಿತ್ಸೆ ಸುಲಭವೇ? ಅಶ್ವಿನಿ ಧನ್ವಂ–**
**ತರಿಗಳೆ ಬರಬೇಕಿದೆ ಮತ್ತೇ!**

ಮೇಲಿನ ಸಾಲುಗಳು ಗುಣಪಡಿಸಲಾಗದ ರೋಗ ರುಜಿನಗಳು ನಮ್ಮನ್ನು ಭಾಧಿಸುತ್ತಿರುವುದನ್ನು ತಿಳಿಸುತ್ತವೆ.

ಶ್ರೀಮಂತವಾದ, ಉಜ್ವಲವಾದ ಪರಂಪರೆಯ ಜೊತೆಗೆ ಹೇಯ, ಅಮಾನುಷ, ಕಲುಷಿತವು ಕೂಡ ನಮಗೆ ಬಳುವಳಿಯಾಗಿ ಬಂದಿದೆ.

**ಭಾಷೆ ಜಾತಿ ಮತ ದೇವರು ದರ್ಶನ–**
**ಒಂದೇ ಎರಡೇ ಈ ನೆಲಕೆ?**
**ಈ ವೈವಿಧ್ಯವೆ ಪ್ರಕೃತಿ; ಅರಿತರಿದು**
**ಸುಕೃತಿ, ಮರೆತರಿದುವೇ ವಿಕೃತಿ!**

ಪ್ರಕೃತಿಯ ವೈವಿಧ್ಯದಂತೆ ಸಮಾಜದಲ್ಲೂ ಕೂಡ ವೈವಿಧ್ಯತೆಯಿದೆ. ಸೌಹಾರ್ದತೆಯಿಂದ ಅರಿತು ಬಾಳಿದರೆ ಒಳಿತು ಇಲ್ಲದಿದ್ದಲ್ಲಿ ಬದುಕು, ಸಮಾಜ, ದೇಶದ ವಿಕೃತಿಗೆ ಕಾರಣವಾಗುತ್ತದೆ.

ನಮ್ಮ ದೇಶವನ್ನು ಸಾವಿರ ಹೆಡೆಗಳ ಆದಿಶೇಷನಿಗೆ ಹೋಲಿಸಲಾಗಿದೆ. ಇದರ ಫಣಾಮಣಿ ರುಚಿ ಲೋಕಗಳನೆ ತುಂಬಿದೆ. ಆದರೆ ಅದರ ಮುಖದಿಂದ ವಿಷವು ಹೊರಹೊಮ್ಮಿದೆ. ಇದು ಸರ್ವರ ಉದ್ಧಾರಕ್ಕೆ ಮಾರಕವಾಗಿದೆ.

**ನಮ್ಮ ಪವಿತ್ರ ಸನಾತನ ವೃಕ್ಷವು**
**ಬ್ರಹ್ಮ ರಾಕ್ಷಸರ ಗೂಡಾಯ್ತು!**
**ಭೂತ ಬೇತಾಳ ದೆವ್ವ ಗೂಗೆಗಳು**
**ಜನರ ಬೆದರಿಸುತ ಚೀರಿದವು!**

ಅಂದಿನ ಋಷಿಗಳು ಮೇಲು–ಕೀಳು ಎಂಬ ಭೇದವನ್ನರಿಯದೆ ಎಲ್ಲರನ್ನು ಒಂದೆಂದು ಭಾವಿಸಿದರು. ಆದರೆ ನಂತರದಲ್ಲಿ ಜಾತಿ, ಮತ, ಧರ್ಮ, ಹೆಣ್ಣು–ಗಂಡು ಎಂಬ ಭಿನ್ನತೆಗಳು ತಲೆದೋರಿ ಪವಿತ್ರ ಸನಾತನ ವೃಕ್ಷವು ರಾಕ್ಷಸರ ಗೂಡಾಗಿದೆ. ಸರ್ವರ ಉದ್ಧಾರಕ್ಕೆ ತಡೆಯಾಯಿತು. ವಾಸ್ತವ ಸಮಾಜದ ಸತ್ಯ ಚಿತ್ರಣ ಸೂಕ್ತ ಸಂಕೇತಗಳೊಂದಿಗೆ ಮೂಡಿದೆ–

ಜಗದ ನವೋದಿತ ನಾಗರಿಕತೆಗಳು
ನಾಗಾಲೋಟದಿ ಮುನ್ನಡೆಯೇ,
ಭಾರತ ನಿಂತಿತು; ದಾಸ್ಯದ ನೊಗವನು
ಹೊತ್ತಿತು, ಹೆಣಗಳ ಪೂಜಿಸಿತು!

ಮೇಲಿನ ಸಾಲುಗಳು ಪ್ರಸ್ತುತ ವ್ಯವಸ್ಥೆಗೆ ಹಿಡಿದ ಕನ್ನಡಿಯಂತಿವೆ.

ನಮ್ಮ ಚರಿತ್ರೆಗೆ ಜರಡಿಯ ಹಿಡಿಯುವ
ಸೋಸುವ ಕೇರುವ ಕಾಲವಿದು!
ಜಳ್ಳುಗಳಳಿಯಲಿ, ಕಾಳುಗಳುಳಿಯಲಿ
ಮುಂದಿನ ಸೌಖ್ಯಕೆ ಮೂಲವಿದು!

ಚರಿತ್ರೆಯ ಧಾನ್ಯ ರಾಶಿಯಲಿ ಕೆಡುಕಿನ ಜಳ್ಳುಗಳನ್ನು ಸೋಸಿ ಒಳಿತಿನ ಕಾಳುಗಳನ್ನು ಬಿತ್ತನೆಗೆ ಸಂಗ್ರಹಿಸಬೇಕಾದ ಅನಿವಾರ್ಯತೆ ಇಲ್ಲಿದೆ. ಇದರಿಂದ ಮಾತ್ರ ಮುಂದೆ ಸುಖ ಸಾಧ್ಯ.

ಇಹಕೋ ಪರಕೋ, ಪಾಶ್ಚಾತ್ಯಕ್ಕೋ
ಪೌರ್ವಾತ್ಯಕ್ಕೋ ನಮ್ಮ ಋಣ?
ತಾಯಿಗೊ ತೊತ್ತಿಗೊ ಅನ್ಯರ ಭಾಷೆಗೊ
ನಮ್ಮ ಬಾಷೆಗೋ ಸನ್ಮಾನ?

ಅನ್ಯಲೋಕ, ಅನ್ಯದೇಶ, ಅನ್ಯಭಾಷೆ, ಇವುಗಳ ಪ್ರಭಾವ ಮತ್ತು ದಾಳಿಯಿಂದಾಗಿ ಅವುಗಳ ವ್ಯಾಮೋಹಕ್ಕೆ ಒಳಗಾಗಿದ್ದೇವೆ. ನಮ್ಮತನವನ್ನು ಮರೆತು ಯಾವುದು ಮುಖ್ಯ, ಯಾವುದು ಅಮುಖ್ಯ ಎಂಬ ಗೊಂದಲದಲ್ಲಿ ಸಿಕ್ಕಿರುವ ಬಗೆಯನ್ನು ಇಲ್ಲಿ ಹೇಳಿದ್ದಾರೆ. ವಿಜ್ಞಾನ ನಮಗೆ ಬೆಂಬಲವಾಗಿ ಧರ್ಮವನ್ನು ಕಾಯಬೇಕಾಗಿದೆ.

ಎಲ್ಲಾ ಕಡೆಯಲ್ಲೂ ಪ್ರಕ್ಷುಬ್ಧತೆ, ಕೋಲಾಹಲ ತುಂಬಿ ಸಾಗರ ಮಥನ ನಡೆದಿದೆ. ಅಮೃತದ ಉದ್ಭವಕ್ಕೆ ಮುನ್ನ ವಿಷ ಹೊರಬಂದಿದೆ. ಅಂದು ಸುರಾಸುರರು ಸಾಗರ ಕಡೆದಾಗ ಹೊಮ್ಮಿದ ನಂಜನ್ನು ಶಿವ ಕುಡಿದು ವಿಷಕಂಠನಾಗಿ ಲೋಕೋದ್ಧಾರ ಮಾಡಿದ. ಆದರೆ ಇಂದು ಹುಟ್ಟಿದ ವಿಷ ಕುಡಿಯಲು ಶಿವ ಬರುವನೋ, ಬಾರನೋ ತಿಳಿದಿಲ್ಲ. ಯಾವ ನಂಬಿಕೆಯೂ ಇಲ್ಲ. ಅದಕ್ಕಾಗಿ "ನಾವೊಬ್ಬೊಬ್ಬರು ನಂಜನು ಹೀರುವ ಶಿವನಾಗದೆ ಗತಿ ಬೇರಿಲ್ಲ!" ಎಂಬ ಹೇಳಿಕೆ ಅಮೃತ ಸವಿಯಲು ವಿಷ ಉಣ್ಣಲೇಬೇಕಾದ ಅನಿವಾರ್ಯ ಸ್ಥಿತಿಯನ್ನು ಚಿತ್ರಿಸಿದೆ. ಸರ್ವರ ಉದ್ಧಾರಕ್ಕಾಗಿ "ಇತಿಹಾಸದ ಇಂಗಾಲವ ನುಂಗಿಯೆ, ಪ್ರಾಣವಾಯು ಕೊಡಬೇಕೀಗ"- ಎಂಬುದು ಬದುಕಲು ಬೇರೇ ಮಾರ್ಗವೇ ಇಲ್ಲ ಎಂಬುದನ್ನು ತಿಳಿಸುತ್ತದೆ.

ಒಂದು ಸತ್ಯಕ್ಕೆ ಸಾವಿರ ತಲೆಗಳಿದ್ದರು ಒಡಲು ಒಂದೇ. ಇದನ್ನು ಮರೆತರೆ ಬದುಕು ಸಾಧ್ಯವಿಲ್ಲ.

ಎರಡು ತಲೆಗಳಲ್ಲಿ ಒಂದು ವಿಷ ಫಲವ
ತಿಂದು ಸತ್ತ ಹಕ್ಕಿಯ ಸಾಕ್ಷಿ
ನಮ್ಮ ಮುಂದಿರಲಿ: ಐಕ್ಯದ ಬಲದಲಿ
ಮೂಡಲಿ ಸರ್ವೋದಯಲಕ್ಷ್ಮಿ!

ಇತಿಹಾಸದ ಗತವೈಭವದ ಪರಂಪರೆಯನ್ನು ಉಳಿಸಿಕೊಂಡು ವಿಷ ಬೀಜಗಳಂತಿರುವ ಜಾತಿ, ಮತ, ಧರ್ಮಗಳ ಭೇದ, ಮೇಲು ಕೀಳು ಎಂಬ ಭಾವನೆ ತೊಲಗಿಸಿ ಐಕ್ಯತೆಯಿಂದ ಇದ್ದರೆ ಮಾತ್ರ ಸರ್ವೋದಯ ಸಾಧ್ಯ ಎಂದಿದ್ದಾರೆ. ಪ್ರಸ್ತುತ ಸಮಾಜಕ್ಕೆ ಸೂಕ್ತ ಸಂದೇಶ ಇದಾಗಿದೆ.

**'ಚೊಗಸೆ'** ಕವನ ಸಂಕಲನದ **'ಸ್ವಾತಂತ್ರ್ಯ ಪುರುಷ'** ಕವನವು ಭಾರತವು ಸ್ವಾತಂತ್ರ್ಯ ಪಡೆದ ಸಂದರ್ಭದ ಸ್ಥಿತಿ ಮತ್ತು ನಂತರದ ಬೆಳವಣಿಗೆಯನ್ನು ತಿಳಿಸುತ್ತದೆ.

ಸ್ವಾತಂತ್ರ್ಯ ಪುರಷನನ್ನು ಕವಿ "ಇವನು ನನ್ನ ಕಣ್ಣ ಮುಂದಿನ ಹುಡುಗ" ಎಂದಿರುವುದು ನಾಡಿಗೂ ಇವರಿಗೂ ಇರುವ ಬಾಂಧವ್ಯವನ್ನು ತಿಳಿಸುತ್ತದೆ. ಜೊತೆಗೆ ಸ್ವಾತಂತ್ರ್ಯ ಹೋರಾಟದ ಕಾವು ಇವರಿಗೆ ತಾಗಿರುವುದು ತಿಳಿಯುತ್ತದೆ.

**ಕಾಲು ಶತಮಾನದ ಹಿಂದೆ ಒಂದು ನಟ್ಟ ನಡುರಾತ್ರಿ, ರಾಮನಾಮ**
**ಸಿಂಹಗರ್ಜನೆಗಳ ಹಿನ್ನಲೆಯಲ್ಲಿ, ಯೂನಿಯನ್ ಜಾಕ್ ಕೆಳಗಿಳಿದು,**
**ಅಶೋಕ ಚಕ್ರಕ್ಕೆ ಜೀವ ಬಂದು, ನವಯುಗದ ಕೀಲಿ ಕೈಯಾಗಿ**
**ಕಣ್ಣಾಗಿ ಹುಟ್ಟಿದ ಮಗು ಇವನು:**
**ಹುಟ್ಟಿದ ತರುಣದಲ್ಲಿ ತಂದೆಯನ್ನು ತಿಂದುಕೊಂಡ ದುರ್ದೈವಿ.**

ಸ್ವಾತಂತ್ರ್ಯ ಗಳಿಸಿ ತಂದೆ ಕಳೆದುಕೊಂಡಿದ್ದಾನೆ ಆದರೆ ತಾಯಿ ಇದ್ದಾಳೆ ಜೊತೆಗೆ ತಾಯಿಗೆ ದ್ರೋಹ ಬಗೆಯುವವರೂ ಕೂಡ ಇದ್ದಾರೆ.

ಸ್ವಾತಂತ್ರ್ಯ ಪುರುಷನ ವರ್ತನೆಯ ಬಗ್ಗೆ ತಿಳಿಸುತ್ತಾ, ಆಧುನಿಕತೆ ವಿಜ್ಞಾನ, ತಂತ್ರಜ್ಞಾನ, ಪಾಶ್ಚಾತ್ಯ ಪ್ರಭಾವ ಇವುಗಳಿಂದ ಉಂಟಾದ ಪರಿಣಾಮದ ಚಿತ್ರಣ ಕಟ್ಟಿಕೊಟ್ಟಿದ್ದಾರೆ.

ಹಿಂದೆ ಸ್ವಾತಂತ್ರ್ಯಕ್ಕಾಗಿ ಚಳುವಳಿ ಹೋರಾಟ ನಡೆದವು. ಇಂದು ಸೌಕರ್ಯಕ್ಕಾಗಿ ಚಳುವಳಿ ಹೋರಾಟಗಳು ನಡೆಯುತ್ತಿವೆ. ಪಿತ್ತ ಕೆರಳಿ ಹೋರಾಟಕ್ಕಿಳಿಯುವ ಸಂಭವವೂ ಇದೆ.

**ಇಳಿದನೋ–ಬೀದಿಯ ದೀಪಗಳಿಗೆಲ್ಲಾ ಮೋಕ್ಷ:**
**ಬಸ್ಸುಗಳೆಲ್ಲ ಭಗ್ನ ! ರೈಲು ನಿಲ್ಲಿಸುತ್ತಾನೆ, ಬೆಂಕಿ ಹಚ್ಚುತ್ತಾನೆ**
**ದೊಂಬಿ ಲೂಟಿಗಳಲ್ಲಿ ತೊಡಗುತ್ತಾನೆ !**
**ಪೋಲೀಸರದೊನೆ ಸೆಣಸುವುದು ಇವನ ಆಜನ್ಮಸಿದ್ಧ ಹಕ್ಕು:**
**ಹಿರಿಯರಿಂದ ಬಂದ ಗುಣ !**

ಹೀಗೆ ಬೀದಿಗಿಳಿದವರನ್ನು ಪೋಲೀಸರು ಬಂದಿಸುತ್ತಾರೆ. 'ಅವರಿಗೂ ಪೂರ್ವಿಕರ ಬಳುವಳಿಯಿದೆ' ಎಂಬ ಹಾಸ್ಯದೊಂದಿಗೆ ಅವರ ವರ್ತನೆಯನ್ನು ಚಿತ್ರಿಸಿದ್ದಾರೆ.

ಸ್ವಾತಂತ್ರ್ಯ ಪುರುಷ ಒಳ್ಳೊಳ್ಳೆಯ ಕೆಲಸಗಳನ್ನು ಮಾಡುತ್ತಾ ಆಪದ್ಬಂಧು, ಅನಾಥರಕ್ಷಕನಾಗಿ ಸಂಸಾರದ ಹೊಣೆ ಹೊತ್ತಿದ್ದಾನೆ.

**ನಮ್ಮಂಥವರೆನ್ನೆಲ್ಲ ಕಟ್ಟಿಕೊಂಡು ಹಾಗೂ ಹೀಗೂ ಏಗುತ್ತ**
**ಮುನ್ನುಗುತ್ತಿರುವ ಈ ಸ್ವಾತಂತ್ರ್ಯಪುರುಷನಿಗಿರಲಿ**
**ಎಲ್ಲ ಯಶಸ್ಸು ಶುಭಮಸ್ತು !**

ಸ್ವಾತಂತ್ರ್ಯ ಪುರುಷನಿಗೆ ಯಶಸ್ಸು ದೊರೆತರೆ ತಮ್ಮ ಯಶಸ್ಸು ಸಾಧ್ಯ ಎಂಬ ಆಶಯವೂ ಕವನದ ಕೊನೆಯಲ್ಲಿ ವ್ಯಕ್ತವಾಗಿದೆ.

**'ಬೊಗಸೆ'** ಕವನ ಸಂಕಲನದ **'ವಚನಕಾರರಿಗೆ'** ಕವನವು ಕನ್ನಡ ಭಾಷೆಗೆ ವಚನಕಾರರು ತಂದುಕೊಟ್ಟ ಸ್ಥಾನಮಾನದ ಬಗ್ಗೆ ತಿಳಿಸುತ್ತದೆ. ಸಂಸ್ಕೃತ ತಿಳಿದಿದ್ದರೆ ಮಾತ್ರ ಪಂಡಿತ, ಸಂಸ್ಕೃತ ಭೂಯಿಷ್ಠವಾದುದು ಮಾತ್ರ ಕಾವ್ಯ ಎಂಬ ನಂಬಿಕೆಯಲ್ಲಿದ್ದ ಸಮಾಜದಲ್ಲಿ ಕನ್ನಡ 'ಚಕ್ರವರ್ತಿ'ಯಾದ ಬಗೆ ಅನುಪಮ ಮತ್ತು ಹೆಮ್ಮೆಯ ವಿಷಯವಾಗಿದೆ.

**ಸಂಸ್ಕೃತದ ಸಾಮಂತ ಭಾಷೆಯಾಗಿದ್ದೆಮ್ಮ**
**ಕನ್ನಡಕೆ ಚಕ್ರವರ್ತಿತ್ವವನು ನೀವಿತ್ತು**
**ಎತ್ತಿದಿರಿ. ಬಿತ್ತಿದಿರಿ ಧರ್ಮಬೀಜಾಳಿಯನು**
**ಕನ್ನಡದ ಹೊಲಗದ್ದೆಗಳಲಿ.......**

ಸತ್ವ ತಿಳಿಯದ ಭೂಮಿಯಲ್ಲಿ ಬೀಜ ಬಿತ್ತಿ ಬೆಳೆಯಲಾಗದೆ ಜನ ಒದ್ದಾಡುತ್ತಿದ್ದ ಸಂದರ್ಭದಲ್ಲಿ ಕನ್ನಡದ ಹೊಲಗದ್ದೆಗಳಲಿ ಧರ್ಮಬೀಜ ಬಿತ್ತಿ ಹುಲುಸಾದ ಬೆಳೆ ಪಡೆಯುವಂತಾಯಿತು. ವೇದ, ಉಪನಿಷತ್ತು, ಪುರಾಣಗಳಿಂದ ವಂಚಿತರಾಗಿದ್ದ ಸಾಮಾನ್ಯ ಮತ್ತು ಕೆಳವರ್ಗದ ಜನರೆ ಜನಸಾಮಾನ್ಯರ ಭಾಷೆಯಲ್ಲಿ ವಚನ ರಚಿಸುವ ಮೂಲಕ ಜಾತಿ, ಮತ ಪರಿಗಣಿಸದೆ ಎಲ್ಲ ಜಾತಿಯವರು ವಿವಿಧ ಪಾತ್ರಗಳನ್ನು ನಿರ್ವಹಿಸಿ ನಾಡನ್ನು, ನುಡಿಯನ್ನು ಉದ್ಧರಿಸಿದರು. ಪವಾಡಗಳ ಮೂಲಕ ಜನರನ್ನು ಮೆಚ್ಚಿಸಿ ಭಕ್ತಿಯನ್ನು ಮೆರೆದರು. ಹೊಸ ಮೌಲ್ಯಗಳನ್ನು ಬಿತ್ತಿದರು. ಬೆಂಡು, ಜೊಂಡುಗಳ ದೂರ ಮಾಡಿ ಗಟ್ಟಿತನವನ್ನುಳಿಸಿದ ಕೀರ್ತಿ ವಚನಕಾರರದು.

**....................ಕಲ್ಯಾಣ ಸಂಗಮಕೆ**
**ದಶದಿಕ್ಕುಗಳೆ ಬರಲು, ಮುಳುಗದೆಯೆ ಬೆಳಗಿದನು**
**ಕೆಲಕಾಲ ಕನ್ನಡದ ಬಾನಿನಲಿ ಶಿವಭಾನು !**

ವಚನಕಾರರಿಂದ ಕನ್ನಡಕ್ಕೆ ಅಭೂತಪೂರ್ವ ಸ್ಥಾನ ದೊರೆಯಿತು. ದಶದಿಕ್ಕುಗಳಿಂದಲೂ ವಚನಕಾರರು ತಮ್ಮ ತತ್ವ, ಚಿಂತನೆಗಳನ್ನು ಹೊತ್ತು ಕಲ್ಯಾಣಕ್ಕೆ ಬಂದರು. ಇದರಿಂದ ಕೆಲವು ಕಾಲವಾದರು ಕನ್ನಡದ ಆಕಾಶದಲ್ಲಿ 'ಶಿವಸೂರ್ಯ' ಮುಳುಗದೆಯೆ ಬೆಳಗಿದನು ಎಂಬ ರೂಪಕ ಅದ್ಭುತವಾಗಿದೆ. ಇದು ಮುಂದಿನವರಿಗೆ ದಾರಿದೀಪವೂ ಆಯಿತು.

**'ನೂರೊಂದು'** ಕವನ ಸಂಕಲನದ **'ಕನ್ನಡ ತಾಯಿಗೆ'** ಕವನವು ತೋರಿಕೆ, ಹೊಗಳಿಕೆಗಾಗಿ ಕನ್ನಡಕ್ಕಾಗಿ ಹೋರಾಡುತ್ತೇನೆ ಎಂದು ಹೇಳುವವರನ್ನು ನಯವಾಗಿ ಟೀಕಿಸುತ್ತಲೇ 'ಮಗನ ಕರ್ತವ್ಯ' ಏನು ಎಂಬುದನ್ನು ತಿಳಿಸಿದ್ದಾರೆ.

**ಅಮ್ಮ, ಕನ್ನಡ ತಾಯಿ, ಪ್ರೀತಿಸುತ್ತೇನಮ್ಮ ನಿನ್ನನ್ನ–**
**ಮಗ ತಾಯಿಯನ್ನೆಷ್ಟು ಪ್ರೀತಿಸುತ್ತಾನೋ ಅಷ್ಟೆ ;**
**ಹೆಚ್ಚಲ್ಲ, ಕಡಿಮೆಯೂ ಅಲ್ಲ. –**

ಎಂಬ ಸಾಲುಗಳು ಕನ್ನಡ ತಾಯಿಯ ಮೇಲೆ ಮಗನೊಬ್ಬ ಇಟ್ಟಿರುವ ಪ್ರಾಮಾಣಿಕ ಪ್ರೀತಿಯನ್ನು ವ್ಯಕ್ತಪಡಿಸುತ್ತಿವೆ.

**ನಿನಗಾಗಿ ಉಪವಾಸ ಮಾಡುತ್ತೇನೆ, ಪ್ರಾಣದ ಹಂಗು**
**ತೊರೆಯುತ್ತೇನೆ ಇತ್ಯಾದಿ ಹೇಳುವ ಧೈರ್ಯ**
**ನನಗಿಲ್ಲ, ತಾಯಿ. ಪ್ರಾಣದ ಆಸೆ**
**ನನಗುಂಟು; ಬಿಡುವವರು ಬಿಡಲಿ, ಸಂತೋಷ!**

ಒಳಗೊಂದು-ಹೊರಗೊಂದು ಬಣ್ಣ ಹಚ್ಚಿಕೊಂಡು ಡಂಭಾಚಾರಿಗಳಾಗಿ ಕಪಟವೇಸಗುವ ಜನರನ್ನು ನಯವಾಗಿ ಇರಿಯುವುದರ ಮೂಲಕ ಮನುಷ್ಯ ಸಹಜ ಮತ್ತು ವಾಸ್ತವ ಸ್ವಭಾವವನ್ನು ತೆರೆದಿಟ್ಟಿದ್ದಾರೆ.

ಕನ್ನಡ ನಾಡಿಗಾಗಿ, ಕನ್ನಡ ನುಡಿಗಾಗಿ ಹೋರಾಡುತ್ತೇನೆಂದು ಪತ್ರಿಕೆಗಳಲ್ಲಿ ಹೇಳಿಕೆ ಕೊಡುತ್ತಾ, ಹೋರಾಟ ಚಳುವಳಿಗಳ ಹೆಸರಿನಲ್ಲಿ ಕೀರ್ತಿ, ಹಣ ಸಂಪಾದನೆ ಮಾಡಲು ಹೊರಟಿರುವವರಿಂದ ಯಾವ ಪ್ರಯೋಜನವೂ ಇಲ್ಲ. ಬಾಯಿ ಮಾತಿನ ಹೊಗಳಿಕೆಯಿಂದ ಏನೂ ಸಾಧ್ಯವಿಲ್ಲ ಎನ್ನುತ್ತಾ ನಿನ್ನಿಂದ ನಾನು ಇನ್ನೇನನ್ನೂ ಬಯಸುವುದಿಲ್ಲ. "ನನಗೆ ನೀ ಕೊಟ್ಟ ಅಷ್ಟಿಷ್ಟು ಮೊಲೆಹಾಲು ಸಾಕು" ಎಂಬ ತೃಪ್ತಿಯನ್ನು ಹೊಂದಿದ್ದಾರೆ ಜೊತೆಗೆ ನಾನು ಅವಿಧೇಯ ಅಥವಾ ಸೋಮಾರಿಯಲ್ಲ.

"ನೆನಪಿಡು ತಾಯಿ: ನನ್ನದೇನಿದ್ದರೂ ಮೌನದ ಕೆಲಸ"-ಎಂಬ ಕಡೆಯ ಸಾಲು ನಿಜವಾಗಿಯೂ ಆಗಬೇಕಾದ ಕಾರ್ಯವಿಧಾನವನ್ನು ಸ್ಪಷ್ಟಪಡಿಸುತ್ತದೆ.

**'ನೀವೆ ನಮಗೆ ದಿಕ್ಕು'** ಕವನ ಸಂಕಲನದ **'ಸಮಾಧಾನ'** ಕವಿತೆಯಲ್ಲಿ ಸ್ವಾತಂತ್ರ್ಯಕ್ಕಾಗಿ ಹೋರಾಡಿ, ತ್ಯಾಗ ಬಲಿದಾನಗಳಿಂದ ಅದನ್ನು ದೊರಕಿಸಿಕೊಟ್ಟಿದ್ದು. ಅದನ್ನು ಹಬ್ಬವಾಗಿ ಆಚರಿಸುತ್ತಾ ಬಂದಿದ್ದೇವೆ. ಆದರೆ ಇಂದು ಅದೂ ಇಲ್ಲವಾಗುತ್ತಿದೆ. ನಾವಂದುಕೊಂಡಷ್ಟು ನಡೆಯದಿದ್ದರೂ ಇದು ಪೂರ್ತಿ 'ನರಕ'ವಲ್ಲ ಎಂಬ ಸಮಾಧಾನವನ್ನು ವ್ಯಕ್ತಪಡಿಸಿ ಮುಂದಿನ ಪಯಣಕ್ಕೆ ಶುಭ ಕೋರಿರುವುದನ್ನು ಕಾಣಬಹುದು.

ಇಂದು ನಮಗೆ ಸ್ವಾತಂತ್ರ್ಯ ದೊರೆತಿದೆ. ಆದರೆ ಅದು ಯಾರನ್ನು ಯಾರು ಬೇಕಾದರೂ ಬೈಯ್ಯುವ, ಬೈಸಿಕೊಳ್ಳುವ ಹಕ್ಕನ್ನು ನೀಡಿದೆ. ಅದನ್ನು ಬಳಸಿಕೊಳ್ಳದೆ ನಲವತ್ತು ವರ್ಷಗಳಾಚೆಯ ಭಾರತವನ್ನು ನೋಡಬೇಕು.

**ಇಂದು ತಾರೆಗಳುದುರಿ ಬೋಳಾದ,**
**ಹೊಗೆ ಮೋಡಗಳು ಕವಿದ ಗಗನವನ್ನು ಮರೆತು.**
**ಸ್ವಚ್ಛ ಗ್ರಹನಕ್ಷತ್ರ ಖಚಿತ ಆಕಾಶಗಂಗೆಯ ಕಡೆಗೆ**
**ಕೈಲಾಸದಡಿಗೆ ಮತ್ತು ಹಿಮಗಿರಿಯ ಮುಡಿಗೆ.**

ಎಂಬ ಭವ್ಯ ಚಿತ್ರಣದ ದರ್ಶನ ಮಾಡಿಸಿದ್ದಾರೆ. ಆದರೆ ಇದನ್ನು ನಂಬಲು ಸಾಧ್ಯವೇ? ಎಂಬ ಪ್ರಶ್ನೆಯೊಂದಿಗೆ ಅದು ಸತ್ಯ ಎಂಬುದನ್ನು ಸಹ ದೃಢೀಕರಿಸಿದ್ದಾರೆ.

**ಅಂದು ಪಾರಾವಾರ ಮಥನದಿಂದ ಹುಟ್ಟಿತು**
**ಅಮೃತ,**
**ಜೊತೆಗೆ ಇಂದಿಗೂ ನಮ್ಮನ್ನು ಕಾಡುತ್ತಿರುವ**
**ಕಾಲಕೂಟ,**

ಹೀಗೆ ಸಮುದ್ರ ಮಥನದಿಂದ ಅಮೃತ, ಜೊತೆಗೆ ವಿಷವೂ ದೊರೆತಂತೆ, ಸ್ವಾತಂತ್ರ್ಯದ ಜೊತೆಗೆ ಅದನ್ನು ದುರುಪಯೋಗ ಪಡಿಸಿಕೊಳ್ಳುವ ಪಡೆಯೂ ಸೃಷ್ಟಿಯಾಯಿತು. ವಿಷ ನಾಶವಾಗಿ ಅಮೃತ ಉಳಿಯಬೇಕಾದರೆ "ಒಬ್ಬೊಬ್ಬರೆದೆಯಲ್ಲೂ ಎಚ್ಚರಬೇಕು ಶಿವಸತ್ವ" ಎಂಬ ಮಾತು ಎಲ್ಲರ ಆಳಕ್ಕೆ ಇಳಿಯಬೇಕಾಗಿದೆ.

ಗಾಂಧಿಯನ್ನು ವಾಮನಿಗೆ ಹೋಲಿಸಿ ಅವರ ಸಾಧನೆಯ ಕಡೆಗೆ ಅದ್ಭುತ ಕಲ್ಪನೆ ನೀಡಿದ್ದಾರೆ.

**ವಾಮನನಾಗಿ ಬಂದ ಗಾಂಧಿ ತ್ರಿವಿಕ್ರಮನಾಗಿ ಬೆಳೆದು**
**ಆಂಗ್ಲ ಬಲಿಚಕ್ರವರ್ತಿಯ ತಲೆಯ ಮೇಲೆ ಕಾಲಿಟ್ಟು**
**ಲೋಕಸಮಸ್ತವನ್ನೂ ಗೆದ್ದ ಕತೆ ಆಧುನಿಕ ಪುರಾಣ ;**
**ಪುರಾಣಕ್ಕು ಬಂದಿತ್ತು ಪ್ರಾಣ !**

ಆದರೆ ನಾವಂದುಕೊಂಡ ಸ್ವರ್ಗ ಉದಯವಾಗಿಲ್ಲ. ಆದರೆ ಈಗಿರುವುದು ನರಕವಲ್ಲ ಕುರುಡುಗಣ್ಣಿಗಿಂತ ಮೆಳ್ಳೆಗಣ್ಣು ಮೇಲು ಎಂಬಂತೆ ಇರುವುದಕ್ಕೇ ಸಮಾಧಾನ ಪಟ್ಟುಕೊಳ್ಳಬೇಕಾಗಿದೆ. ಕಾಲ ಕಳೆದು ಸ್ವರ್ಗದ ಸೃಷ್ಟಿ ಆಗದಿದ್ದರೂ ೨೧ನೇಯ ಶತಮಾನ ಬರುತಿದೆ.

**ನೆನ್ನೆ ಗತಿಸಿದೆ ; ನಾಳೆಯ ಪಾಡು ನಾಳೆಗೆ.**
**ಇಂದು 'ವಂದೇ ಮಾತರಂ' ಎನ್ನೋಣ ;**
**ಭರತಮಾತೆಗೆ ಜಯವಾಗಲು ಎನ್ನೋಣ ;**
**ಜನಗಣಮನ ಅಧಿನಾಯಕನಿಗೆ ಜಯವಾಗಲಿ ಎನ್ನೋಣ ;**
**ಸುಗಮವಾಗಲಿ ರಾಷ್ಟ್ರಯಾನ !**

ನೆನ್ನೆ-ನಾಳೆಗಳ ನೆನಪು, ಯೋಚನೆಯಲ್ಲಿ ಮುಳುಗದೆ ಇಂದಿನ ಬಗ್ಗೆ ಯೋಚಿಸೋಣ ಎನ್ನುತ್ತಾ ವ್ಯರ್ಥ ಕಾಲಹರಣ ಬೇಡ, ಭರತ ಮಾತೆಗೆ ಜಯವಾಗಲಿ, ರಾಷ್ಟ್ರಯಾನ ಸುಗಮವಾಗಲಿ ಎಂಬ ಸಂದೇಶ ಸಾರಿದ್ದಾರೆ.

**'ನೀವೆ ನಮಗೆ ದಿಕ್ಕು'** ಕವನ ಸಂಕಲನದ **'ನೋವು'** ಕವಿತೆಯಲ್ಲಿ ಕನ್ನಡ ತಾಯಿಗೆ ಮತ್ತು ಕನ್ನಡ ನುಡಿಗೆ ಬಂದಿರುವ ದುಃಸ್ಥಿತಿಯನ್ನು ಕಂಡು ವಿಷಾದ ವ್ಯಕ್ತಪಡಿಸಿದ್ದಾರೆ.

ದೇಶ ಮತ್ತು ರಾಜ್ಯದ ಉತ್ಸವಗಳು ಪ್ರತಿ ವರ್ಷ ನಡೆಯುತ್ತಿವೆ. ಕೇವಲ ಉತ್ಸವದಂತೆ. ಸಂಭ್ರಮ, ಸಡಗರ, ಗತವೈಭವ ನೆನಪು. ಇವುಗಳ ಹಿಂದಿರುವ ಸಮಸ್ಯೆಗಳ ಹುತ್ತವನ್ನು ಕೆಡಹುವ ಪ್ರಯತ್ನಕ್ಕೆ ಯಾರೂ ಕೈ ಹಾಕುತ್ತಿಲ್ಲ ಅಷ್ಟೇ ಅಲ್ಲದೆ-

ಸ್ವದೇಶದಲ್ಲೇ ನಾವು ಪರದೇಶಿಗಳಾಗಿಹೋಗಿದ್ದೇವೆ;
ನಮ್ಮದಲ್ಲ ಹರ್ಷದ ಹಾಡು.
ನಮ್ಮೆಲ್ಲರಿಗೂ ತೊಟ್ಟಿಲಾದ, ಕೆಲವರಿಗೆ ಮೆಟ್ಟಿಲು
ಹಾಗೂ ಏಣಿಯಾದ ಕನ್ನಡಕ್ಕೀಗಲೂ ವಾಸ್ತವವಾಗಿ
ಕೃಷ್ಣೆಯ ಪಾಡು!
ಯಾವ ದೈವ ಅಕ್ಷಯವಸ್ತ್ರ ಕೊಟ್ಟು, ದುಷ್ಟಕೂಟದ
ದುರಾಕ್ರಮಣದಿಂದ ತಪ್ಪಿಸಬಹುದು?

ಎಂಬ ಸಾಲುಗಳು ನಾವು ಎಂಥ ವಿಷಮ ಪರಿಸ್ಥಿತಿಯಲ್ಲಿದ್ದೇವೆ ಮತ್ತು ಕನ್ನಡಕ್ಕೆ ಬಂದಿರುವ ದುರವಸ್ಥೆಯನ್ನು ಕಣ್ಮುಂದೆ ಕಟ್ಟಿಕೊಟ್ಟಿದ್ದಾರೆ.

ಕನ್ನಡ ನಮ್ಮ ಮಾತೃ ಭಾಷೆ
ಎನ್ನುವುದೀಗ ಬರಿಯ 'ಕ್ಲೀಷೆ'!
ಮಾತೆಯರಿಗೇ ಬೇಕಿಲ್ಲ ಕನ್ನಡ ಮಾತು :
ಎಂದ ಮೇಲೆ ಮಕ್ಕಳ ಭವಿಷ್ಯ ತೂತು !

ಮೇಲಿನ ಸಾಲುಗಳಲ್ಲಿ ಕಾಯುವವರೇ ಕೊಲ್ಲುವ ಕೃತ್ಯ ಎಸಗುವುದಾದರೆ ಮುಂದಿನ ಮಕ್ಕಳ ಭವಿಷ್ಯದ ಗತಿಯೇನು ಎಂಬ ಆತಂಕ ವ್ಯಕ್ತವಾಗಿದೆ.

ವೇದಿಕೆಯ ಮೇಲಿನ ಭಾಷಣದಲ್ಲಿ ಮಾತ್ರ ಕನ್ನಡಕ್ಕಾಗಿ ಪ್ರಾಣವನ್ನಾದರೂ ಕೊಡುತ್ತೇವೆನ್ನುವ ಮಂದಿ ಇಂತಹ ಅನರ್ಥ ಹೇಳಿಕೆಗಳಿಗೆ ಬದಲಾಗಿ ನ್ಯಾಯವಾಗಿ ತಾಯಿಯನ್ನು ಎಷ್ಟು ಪ್ರೀತಿಸಬೇಕೋ ಅಷ್ಟು ಪ್ರೀತಿಸಿದರೆ ಸಾಕು ಎಂದಿದ್ದಾರೆ.

ಕವನದ ಎರಡನೆಯ ಭಾಗದಲ್ಲಿ ಆಶ್ರಯ ಕೇಳಿ ಬಂದವರೇ ಆಕ್ರಮಿಸಿ ಕಬಳಿಸುತ್ತಿರುವುದನ್ನು

ವಾಮನರಾಗಿ ಬಂದವರು ತ್ರಿವಿಕ್ರಮರಾಗಿ ಬೆಳೆದು
ತುಳಿಯುತ್ತಿರುವಾಗ ಕನ್ನಡಕ್ಕೆಲ್ಲಿಯ
ದೀಪಾವಳಿ?

ಎಂಬ ನೋವಿನ ನಡುವೆ ದೀಪಾವಳಿಯ ಕ್ಷಣಿಕ ಸಡಗರವನ್ನು ಕಂಡು ಶುಭ ಬಯಸಿದ್ದಾರೆ.

ಕನ್ನಡಿಗರ ಮಾತಿರಲಿ, ಈ ದಿನಗಳಲ್ಲಿ
ಯಾರಿಗೆ ತಾನೆ ಸುಖವುಂಟು, ನೆಮ್ಮದಿಯುಂಟು?
ಹಿಮಗಿರಿಯಿಂದ ಕನ್ಯಾಕುಮಾರಿಯವರೆಗೆ .
ರಾಷ್ಟ್ರಕ್ಕೆ ಯಾವ ಶಾಪದ ನಂಟು?
ಆದರೂ,
ಕವಿದ ಕಾವಳದಲ್ಲಿ ಎದೆಗೆಡದೆ,
ದೀಪಾವಳಿಯ ಗಳಿಗೆಯಲ್ಲಿ ಆ ವಿಶ್ವತೇಜಕ್ಕೆ
ಮೊರೆ ಸಲ್ಲಿಸೋಣ,
ನರಕಸಂಹಾರಕ್ಕಾಗಿ ನಾಡಿನುದ್ಧಾರಕ್ಕಾಗಿ:

ಕನ್ನಡ ನುಡಿಗೆ, ಕನ್ನಡ ನಾಡಿಗೆ ದುರವಸ್ಥೆ ಒದಗಿದೆ. ಅಷ್ಟು ಮಾತ್ರವಲ್ಲ ಹಿಮಗಿರಿಯಿಂದ ಕನ್ಯಾಕುಮಾರಿಯವರೆಗಿನ ಇಡೀ ದೇಶಕ್ಕೇ ಶಾಪ ತಗುಳಿ ಸಂಕಷ್ಟದ ಪರಿಸ್ಥಿತಿಯಲ್ಲಿರುವುದಕ್ಕೆ

ವಿಷಾದ ವ್ಯಕ್ತಪಡಿಸಿದ್ದಾರೆ. ಹಾಗೆಂದು ಸುಮ್ಮನಿದ್ದರೆ ಪ್ರಯೋಜನವಿಲ್ಲ. ದೀಪಾವಳಿಯ ಸಡಗರ ಶಾಶ್ವತವಾಗಬೇಕಾದರೆ ನರಕ ಸಂಹಾರವಾಗಿ ನಾಡಿನ ಉದ್ಧಾರವಾಗಬೇಕಾದರೆ ವಿಶ್ವತೇಜಕ್ಕೆ ಮೊರೆ ಸಲ್ಲಿಸಬೇಕಾದ ಅನಿವಾರ್ಯತೆಯನ್ನು ಒತ್ತಿ ಹೇಳಿದ್ದಾರೆ. ಆ ಮೂಲಕ ನಾಡಿನ ದೇಶದ ಮತ್ತು ಭಾಷೆಯ ಉದ್ಧಾರಕ್ಕೆ ಶ್ರಮಿಸಬೇಕಾಗಿದೆ.

**'ನೀವೆ ನಮಗೆ ದಿಕ್ಕು'** ಕವನ ಸಂಕಲನದ **'ಯಾನ'** ಕವಿತೆಯು ದೇಶ, ಭಾಷೆಯ ಮೇಲಿನ ಪ್ರೀತಿ, ಅಭಿಮಾನದ ಜೊತೆಗೆ ಅದರ ರಕ್ಷಣೆಯ ಹೊಣೆಯನ್ನು, ಅದಕ್ಕಾಗಿ ಅನುಸರಿಸಬೇಕಾದ ವಿಧಾನಗಳನ್ನು ಮನಮುಟ್ಟುವಂತೆ ತಿಳಿಸಿದ್ದಾರೆ.

ಹೊಸಗಾನದೊಂದಿಗೆ ನೂತನ ಶತಮಾನ ಕೈ ಬೀಸಿ ಕರೆಯುತ್ತಿದೆ. ಚೈತ್ರದ ಸೊಬಗು ಹೊಂಗನಸಿನ ಗಣಿಯಾಗಿದೆ. ಇತಿಹಾಸದ ಅದುರಿನಿಂದ ಚಿನ್ನವನು ತೆಗೆದು ಶುದ್ಧೀಕರಿಸಿ ಬುದ್ಧಿವಂತಿಕೆಯಿಂದ ಬಳಸಿದರೆ ಅದು ನಿಧಿಯಾಗುತ್ತದೆ ಎಂಬ ಅಂಶಗಳನ್ನು ತಿಳಿಸುತ್ತಾರೆ.

ನೂರಾರು ದೇವತೆಗಳಿದ್ದರೂ ವಿಜ್ಞಾನ ಬಾಳ ಮಂತ್ರವಾಗಿ ಜಳ್ಳನ್ನು ತೂರಿ ಕಾಳನ್ನು ಉಳಿಸಿಕೊಳ್ಳಬೇಕಾಗಿದೆ. ಮೇಲು-ಕೀಳು, ಗಂಡು-ಹೆಣ್ಣು ಎಂಬ ಭೇದವನ್ನು ಅಳಿಸಬೇಕು. ಜಾತಿ-ಮತ, ಮೌಢ್ಯಗಳನ್ನು ಅಳಿಸಿ ನಾವೆಲ್ಲ ಒಂದೇ ಎಂಬ ಭಾವನೆಯನ್ನು ತಳೆಯಬೇಕು. ಅದಕ್ಕಾಗಿ ಕಂಕಣಬದ್ಧರಾಗಬೇಕಾಗಿದೆ.

**ಭಾಷೆ, ಪ್ರಾಂತಗಳಿರಲಿ, ಭಾರತವೆ ಮೊದಲೆಮ್ಮ**
**ಪೂಜೆ, ನಿಷ್ಠೆಗೆ ವಸ್ತುವಾಗಬೇಕು;**
**ಕಾಯಕವೆ ಕರ್ತವ್ಯ, ಅದಕು ಮೀರಿದ ದಿವ್ಯ**
**ಬೇರಿಲ್ಲ, ದೇಶವನು ಕಟ್ಟಬೇಕು !**

-ಎನ್ನುತ್ತಾ ಹಲವಾರು ಭಾಷೆ ಪ್ರಾಂತ್ಯಗಳನ್ನು ಹೊಂದಿದ್ದರೂ ಎಲ್ಲವನ್ನೂ ಪ್ರೀತಿಸಿ ಭಾರತಾಂಬೆಗೆ ಮೊದಲ ಪೂಜೆ ಸಲ್ಲಿಸಬೇಕೆಂದಿದ್ದಾರೆ.

**ಹಿರಿಯ ಚೇತನವೆನಿತೊ ಸಾಗರವ ಕಡೆಕಡೆದು**
**ಸ್ವಾತಂತ್ರ್ಯಸುಧೆಯಿದನು ಸಾಧಿಸಿದುವು;**
**ಅದನು ಎಚ್ಚರದಿಂದ ಕಾಯುವೆವು, ಈ ನಾಡು**
**ಒಡೆಯದಿರಲೆಂದಿಂದು ಪಣ ತೊಡುವೆವು !**

ದೇವತೆಗಳು ಹಾಗೂ ಅಸುರರು ಸೇರಿ ಸಮುದ್ರ ಕಡೆದು ಅಮೃತವ ತಂದಂತೆ ಹಿರಿಯ ಚೇತನಗಳು ಸ್ವಾತಂತ್ರ್ಯವೆಂಬ ಸುಧೆಯನ್ನು ನೀಡಿದ್ದಾರೆ. ಅದನ್ನು ಉಳಿಸಿಕೊಳ್ಳಬೇಕೆಂಬುದನ್ನು ಹೇಳಿದ್ದಾರೆ.

ಸತ್ಯ, ಧರ್ಮ, ಅಹಿಂಸೆ, ಶಾಂತಿ ಸಹಬಾಳ್ವೆಗಳನ್ನು ಒಗ್ಗೂಡಿಸಿಕೊಂಡು ಲೋಕದ ಹಿತಕ್ಕಾಗಿ ದುಡಿಯೋಣ ಎಂಬ ಕರೆಯಿತ್ತಿದ್ದಾರೆ. ೨೦ನೇ ಶತಮಾನ ಮುಗಿಸಿ ೨೧ನೇ ಶತಮಾನಕ್ಕೆ ಕಾಲಿಡುತ್ತಿರುವ ಈ ದೇಶದಲ್ಲಿ ಅಶೋಕನ ಅಹಿಂಸಾ ನೀತಿ ಆವರಿಸಿ ಸರ್ವರ ಉದ್ಧಾರ ಆಗಲಿ ಎಂಬ ಅಪೇಕ್ಷೆ ಮೂಡಿಬಂದಿದೆ.

**ಭಾರತದ ಸ್ವಾತಂತ್ರ್ಯ ಲಕ್ಷ್ಮಿ ಗೆಲ್ಗೆ,**
**ಭಾರತದ ಗಣರಾಜ್ಯ ಲಕ್ಷ್ಮಿ ಗೆಲ್ಗೆ ! -**

ಎಂಬ ಕೊನೆಯ ಸಾಲುಗಳು ಭಾರತ ಮಾತೆಯ ಮೇಲಿನ ಗೌರವ ಅಭಿಮಾನವನ್ನು ಎತ್ತಿ ತೋರುತ್ತವೆ.

ಸಿ.ಪಿ.ಕೆ ಅವರ ಕವನಗಳಲ್ಲಿ ನಾಡು–ನುಡಿಯನ್ನು ಕುರಿತ ಚಿಂತನೆಗಳ ಅನಾವರಣವಾಗಿದೆ. ಎಲ್ಲರಲ್ಲು ತಮ್ಮ ತಮ್ಮ ದೇಶ, ಭಾಷೆ, ನೆಲದ ಬಗ್ಗೆ ಅಭಿಮಾನ ಗೌರವಗಳು ಸಹಜವಾಗಿರುತ್ತವೆ. ಜೊತೆಗೆ ಅವುಗಳಿಗೆ ಧಕ್ಕೆ ಬಂದಾಗ ಕೆರಳಿ ನಿಂತು, ಹೋರಾಡಿ ಉಳಿಸಿಕೊಳ್ಳುವ ಛಲವೂ ಇರುತ್ತದೆ ಎಂಬ ಅಂಶಗಳು ಅವರ ಕವನಗಳಲ್ಲಿವೆ. ಅಷ್ಟೇ ಅಲ್ಲ ತಾಯಿನಾಡು, ನುಡಿಯ ಬಗ್ಗೆ ಅಭಿಮಾನವಿಲ್ಲದ ಸ್ವಾರ್ಥಿ, ಹೇಡಿಗಳು ಸಹ ಇರುವುದನ್ನು ಗುರುತಿಸುವುದರ ಜೊತೆಗೆ ತಾಯಿಯ ರಕ್ಷಣೆಗೆ ಮುಂದಾಗಬೇಕೆಂಬ ಕರೆ ಕೊಟ್ಟಿದ್ದಾರೆ. ನಾಡಸಿರಿ, ತಾಯಿಯ ವೈಭವ, ಮೈಸೂರ ಸೊಬಗು ಎಲ್ಲವನ್ನು ಮನೋಜ್ಞವಾಗಿ ಕಟ್ಟಿಕೊಟ್ಟಿದ್ದಾರೆ. ಕನ್ನಡ ನುಡಿಯ ದುಸ್ಥಿತಿಯ ಬಗ್ಗೆ ನೋವನ್ನು ವ್ಯಕ್ತಪಡಿಸಿದ್ದಾರೆ. ಒಟ್ಟಾರೆಯಾಗಿ ಮೊದಲ ಹೇಳಿದಂತೆ ಅವರ ಕವನಗಳಲ್ಲಿ ಪ್ರೀತಿ, ಅಭಿಮಾನ ಮತ್ತು ಅದನ್ನು ಚಿರಗೊಳಿಸುವ ಮನಸ್ಥಿತಿ ಇರುವುದನ್ನು ಇಲ್ಲಿ ಅನಾವರಣಗೊಳಿಸಲಾಗಿದೆ.

**೪.೫. ವ್ಯಕ್ತಿ ಚಿತ್ರಣ :**

ನಾಡಿನ ಸ್ವತಂತ್ರಕ್ಕಾಗಿ, ಏಳ್ಗೆಗಾಗಿ, ಸಮಾಜದ ಶ್ರೇಯೋಭಿಲಾಸೆಗಾಗಿ, ಕನ್ನಡ ಭಾಷೆ ಮತ್ತು ಸಾಹಿತ್ಯಕ್ಕಾಗಿ ದುಡಿದು ತಮ್ಮ ಬದುಕನ್ನು ಸಮರ್ಪಿಸಿಕೊಂಡಿರುವ ಮಹನೀಯರ ಆದರ್ಶ, ಅವರು ನಡೆದ ಮಾರ್ಗ ತತ್ವ ಆದರ್ಶ, ವ್ಯಕ್ತಿಜಾತಿಗಿಂತ ವ್ಯಕ್ತಿತ್ವ ದೊಡ್ಡದು. ಲೋಕದಲ್ಲಿ ವ್ಯಕ್ತಿ ಉಳಿಯುವುದು ಅವನ ವ್ಯಕ್ತಿತ್ವದಿಂದ ಎಂಬ ಮಾತನ್ನು ತಮ್ಮ ಬದುಕು ಬರಹಗಳ ಮೂಲಕ ಕಟ್ಟಿಕೊಟ್ಟಿದಾರೆ. ಇದು ಇಂದಿನವರಿಗೂ ಕೂಡ ಮಹಾನ್ ವ್ಯಕ್ತಿಗಳ ಬದುಕು ಅನುಕರಣೀಯ ಎಂಬ ಸಂದೇಶವನ್ನು ಸಿಪಿಕೆ ಅವರ ಕವನಗಳ ಮೂಲಕ ಅರಿಯುವ ಕಾರ್ಯವನ್ನು ಈ ಭಾಗದಲ್ಲಿ ಕಾಣಬಹುದು.

**'ಲಯವಿಲ್ಲದ ಬದುಕು'** ಕವನ ಸಂಕಲನದ **'ಮಂಗಳದ ಪರಿ'** ಕವಿತೆಯು ಭೋಗಲಾಲಾಸೆಗೆ ಒಳಗಾಗಿರುವ ಸಾಮಾನ್ಯ ಜನರನ್ನು ಬಾಹುಬಲಿಯ ನಿಸ್ವಾರ್ಥ ಬದುಕಿನೊಂದಿಗೆ ಹೋಲಿಸಿ ವ್ಯಂಗ್ಯ ಮಾತುಗಳ ಮೂಲಕ ಚುಚ್ಚುವ ಪರಿಯನ್ನು ಕಾಣಾಬಹುದಾಗಿದೆ.

**ಲೋಕದಲಿ ಬಹುಮಂದಿ ಭೋಗೈಕಲೋಲುಪರು ;**
**ಕೆಲವರ ವಿರಕ್ತಿಯೊ ಅಭಾವಚೋದಿತವಹುದು ;**
**ಅನುಭವಿಪ ಶಕ್ತಿಯಿಲ್ಲದೆ ವಿರಕ್ತಿಯ ಪಥವ**
**ಹಿಡಿವವರು ಕೆಲಮಂದಿ. ನಿನ್ನ ದಾರಿಯೆ ಬೇರೆ,**
**ಬಾಹುಬಲಿ ! ಸಾಮ್ರಾಜ್ಯ ಲಕ್ಷ್ಮಿಯನು ವಕ್ಷದಲಿ**
**ನೆಲೆಗೊಳುವ ಗಳಿಗೆಯೊಳೆ ಬಿಸುಡುತ, ಮನೋರಥವ**
**ನಿರ್ವೇಗದಲಿ ಬೆಸೆದೆ ; ನಿರ್ವಾಣದಾ ನೀರೆ**
**ನಿನ್ನನೊಲಿಸಿದಳು ; ನೀರಜವಾಯ್ತು ನಿನ್ನಾತ್ಮ !–**

ಎಂಬುದರ ಮೂಲಕ ಪ್ರಸ್ತುತ ಸಮಾಜದ ಜನರು ಭೋಗ, ಸುಖ ಲೋಲುಪತೆಗೆ ಒಳಗಾಗಿಲ್ಲ ಎಂಬಂತೆ, ನಟಿಸುತ್ತಾ ಲೋಕದ ಕಣ್ಣಿಗೆ ಮಣ್ಣೆರಚುವವರ ಮನಸ್ಸಿನ ನಗ್ನ ಸತ್ಯವನ್ನು

ಅನಾವರಣಗೊಳಿಸುತ್ತಾರೆ. ಲೋಕದ ಉದ್ಧಾರಕ್ಕೆ ನೀ ಮಾದರಿಯಾಗುವುದರ ಮೂಲಕ ಜಗತ್ತಿಗೆ ಶಾಂತಿಯ ಬೆಳಕು ಚೆಲ್ಲುವುದರೊಂದಿಗೆ ಶತ್ರುತ್ವವ ತೊಡೆದು ಮಿತ್ರತ್ವ ಪಡೆಯುವಂತೆ ಮಾಡಿದರ 'ಅದೆ ಜಗದ ಮಂಗಳದ ಪರಿ ! ಎಂಬ ವಾಕ್ಯದೊಂದಿಗೆ ಲೋಕಕ್ಕೆ ಶುಭವಾಗಬೇಕೆಂಬ ಆಶಯವನ್ನು ಕವಿ ವ್ಯಕ್ತಪಡಿಸಿದ್ದಾರೆ.

**'ಲಯವಿಲ್ಲದ ಬದುಕು'** ಕವನ ಸಂಕಲನದ **'ಬುದ್ಧಂ ಶರಣಂ ಗಚ್ಛಾಮಿ !'** ಕವಿತೆಯಲ್ಲಿ ಜಗತ್ತು ಜ್ಞಾನಾಂಧಕಾರದಲ್ಲಿ ಮುಳುಗಿದ್ದು ಅಲ್ಲಿ ಜ್ಞಾನ ಜ್ಯೋತಿಯ ಬೆಳಗಲು ಮತ್ತೊಮ್ಮೆ ಹುಟ್ಟಿಬಾ ಎಂದು ಬುದ್ಧನಿಗೆ ಆಹ್ವಾನ ನೀಡುತ್ತಿರುವುದರ ಮೂಲಕ ಕವಿ ಪ್ರಸ್ತುತ ವ್ಯವಸ್ಥೆಯನ್ನು ಅನಾವರಣಗೊಳಿಸಿದ್ದಾರೆ

ಸಿದ್ಧಾರ್ಥನು ತನ್ನ ರಾಜ್ಯಲಕ್ಷ್ಮೀ, ಹೆಂಡತಿ ಮಗುವನ್ನು ತೊರೆದು, ಜ್ಞಾನೋದಯದಿ ಬುದ್ಧನಾದ ಪರಿಯನ್ನು ಹೇಳುತ್ತಿದ್ದಾರೆ.

**ವೈಶಾಖ ಶುಕ್ಲ ಪೂರ್ಣಿಮೆಯಿರುಳು ಬಿಳಿಮುಗಿಳು**
**ಇಳೆಗಿಳಿದು ಬಂದುದೆನೆ ಹಾಲ ತೊರೆಯಲಿ ಮಿಂದು,**
**ನೀ ಬಂದೆ; ಜಗವೆಲ್ಲ ಮೌಢ್ಯತಿಮಿರದೊಳಿರಲು,**
**ದಿವ್ಯ ಜ್ಞಾನಾಂಜನ ಶಲಾಕಾ ಪುರುಷನಾಗಿ**
**ತೆರೆಯಿಸಿದೆ ಕಣ್ಣ, ಹೇ ಬುದ್ಧ ಕರುಣಾಸಿಂಧು !**

ಎಂದು ಹೇಳುತ್ತಾ ನಿನ್ನ ಮಡದಿಗೆ ನಷ್ಟ ಇಡೀ ಲೋಕಕ್ಕೇ ಲಾಭವಾಯಿತು. ನವಧರ್ಮ ಪ್ರವರ್ತಕನೆ ನಿನ್ನಿಂದ ಈ ಭೂಮಿಯ ಬಾಳು ಅಮೃತವಾಯಿತು. ತಿಳಿಯಾದ ಜಲ, ನಿರ್ಮಲ ಗಾಳಿ ಪಸರಿಸಿ ವಿಶ್ವವು ಸರ್ವೋದಯದ ಪರ್ವವನ್ನು ಕಂಡಿತ್ತು ಆದರೆ ಇಂದು ಏನಾಗಿದೆ

**ಹಳೆಯ ಕಥೆಯಿದು ಎಲ್ಲಿ ಹೋದುದಾ ನಿನ್ನ ಪಥ ?**
**ಅಯ್ಯೋ ! ಮತ್ತಿಂದು ಲೋಕದಲಿ ಓಕುಳಿಯಿಹುದು**
**ನೆತ್ತರಿನ ; ಕತ್ತಲೆಯ ಮೊತ್ತ ದಶದಿಶೆಗಳಲಿ**
**ಜೃಂಭಿಸಿದೆ ! ಇನ್ನೊಮ್ಮೆ ಬಾ ನೀನು ಸಿದ್ಧಾರ್ಥ**
**ಅರ್ಥ ಕಾಮವನುಳಿದು ಭೂಮಿ ಧರ್ಮ ಪ್ರೇಮಿ**
**ಯಾಗುವೊಲು ; ಸರ್ವಕಂಠಾಭರಣವಾಗಲಿದು:**
**'ಬುದ್ಧಂ ಶರಣಂ ಗಚ್ಛಾಮಿ !'–**

ಎಂದು, ಇವರನ್ನು ಯಾರಿಂದಲೂ ತಿದ್ದಿ ಸರಿಪಡಿಸಲು ಸಾಧ್ಯವಿಲ್ಲ ಹಾಗಾಗಿ ಮತ್ತೊಮ್ಮೆ ಹುಟ್ಟಿ ಬಾ ಕರುಣಸಿಂಧು' ಎಂದು ಮೊರೆಯಿಟ್ಟಿರುವುದು ಸಮಾಜದ ಬಗ್ಗೆ ಕವಿಗಿರುವ ಕಾಳಜಿಯನ್ನು ವ್ಯಕ್ತಪಡಿಸುತ್ತದೆ.

**'ವರ್ತಮಾನ'** ಕವನ ಸಂಕಲನದ 'ನಾನು-ಗಾಂಧಿ' ಮತ್ತು 'ಗಾಂಧಿ ಜಯಂತಿಯನ್ನು ನೆನೆದು' ಕವಿತೆಗಳು ಅಹಿಂಸಾ ಮಾರ್ಗದಿ ಸ್ವಾತಂತ್ರ್ಯ ತಂದು ಕೊಟ್ಟ ಮಹಾತ್ಮನ ಬಗ್ಗೆ ಸಮಾಜ ನಿರ್ಲಕ್ಷ್ಯ ಮನೋಭಾವನೆ ತಳೆದಿರುವುದನ್ನು ಕಾಣಬಹುದು.

ಕವಿ ಗಾಂಧೀಜಿಯನ್ನು ಕುರಿತು ಓದಿದಾಗಲೆಲ್ಲ ಕತ್ತಲಿನಿಂದ ಬೆಳಕಿನೆಡೆಗೆ ಕೊಂಡೊಯ್ದ ಮಹಾತ್ಮ ನಿನ್ನ ನೋಡುವ ಭಾಗ್ಯ ನನ್ನದಾಗಲಿಲ್ಲ. ಎಂಥ ವಿಪರ್ಯಾಸ ನನ್ನದು ಎಂದುಕೊಳ್ಳುತ್ತಲೇ, ಇಲ್ಲ ನೀವು ಅವಕಾಶ ನೀಡಲಿಲ್ಲ ಎಂದು ಸಮಾಜದ ಕಡೆ ಬೆರಳು ಮಾಡುವುದನ್ನು ಕಾಣಬಹುದಾಗಿದೆ.

ನೀನಂದು ಅಹಿಂಸೆಯ ಮಂತ್ರದಂಡ ಹಿಡಿದು
ಬ್ರಿಟಿಷ್ ಸಾಮ್ರಾಜ್ಯವನ್ನು ಮುಳುಗಿಸುತ್ತಿದ್ದಾಗ,
ಕಡೆಗೆ ಸಿಡಿಗುಂಡಿಗೆದೆ ತೆರೆದಾಗ
ನಾನಿನ್ನೂ ಹಸುಳೆ, ಬಾಪು.
ನಿನ್ನ ಸಮಕಾಲೀನನಾಗಿಯೂ ನಿನ್ನನ್ನು ಕಾಣದ
ದುರ್ದೈವಿ ನಾನು ; –

ಎಂದು ನಿರಾಸೆಯ ಭಾವನೆಯನ್ನು ವ್ಯಕ್ತಪಡಿಸುತ್ತಾ, ಕೃತಘ್ನ ಮನಸ್ಸುಗಳನ್ನು ಟೀಕಿಸುತ್ತಾರೆ.

ಸಾಕ್ರಟೀಸ್ ಬುದ್ಧ ಯೇಸುಕ್ರಿಸ್ತ ಬಸವಣ್ಣ–
ಎಲ್ಲರನ್ನೊಂದೆ ಕಡೆ ನೋಡುವ ಭಾಗ್ಯ ಸ್ವಲ್ಪದರಲ್ಲಿ
ನನ್ನ ಪಾಲಿಗೆ ತಪ್ಪಿತೋ ಏನೊ !
ಹೋಗಲಿ ಬಿಡು.

ಎನ್ನುತ್ತಾ ಅವರೆಲ್ಲರ ವ್ಯಕ್ತಿತ್ವ, ಆದರ್ಶ, ತತ್ವಗಳನ್ನು ಇವರೊಬ್ಬರಲ್ಲೆ ಗುರುತಿಸುವ ಕವಿ ತಾನು ನೋಡಲು ಸಾಧ್ಯವಾಗಲಿಲ್ಲ ಎಂಬ ನಿರಾಸೆಯ ಭಾವನೆಯ ಮೂಲಕವೇ ಸಮಾಜ ಅದನ್ನು ಗುರ್ತಿಸಲಿಲ್ಲ ಎಂದು ಚಾಟಿ ಬೀಸಿದ್ದಾರೆ.

**'ಗಾಂಧಿ ಜಯಂತಿಯನ್ನು ನೆನೆದು'** ಕವಿತೆಯಲ್ಲಿ ಮಾಹಾತ್ಮನ ಬಗ್ಗೆ ಸಮಾಜ ನಿರ್ಲಕ್ಷ್ಯ ಭಾವನೆಯನ್ನೊಂದಿರುವುದನ್ನು ಕವಿ ಖಂಡಿಸಿದ್ದಾರೆ.

ಮೊನ್ನೆ ಮೊನ್ನೆ ನಿನ್ನ ಜಯಂತಿ ನಡೆಯಿತಂತಲ್ಲ, ಬಾಪು–
ನನಗೆ ಗೊತ್ತಾಗಲೇ ಇಲ್ಲ ;
ರಾಜಧನ ರದ್ದಿಸಿದ್ದು, ಜಂಬೂಸವಾರಿ ನಿಂತದ್ದು
ಎಂಥ ಅನ್ಯಾಯ ಎಂಬ ಬಿಸಿ ಬಿಸಿ ಚರ್ಚೆಯಲ್ಲಿ
ನಿನ್ನ ಜನ್ಮದಿನ ಮರೆತೇಹೋಗಬೇಕೆ !
ಮನ್ನಿಸು.
ಈಗಾದರೂ ನೆನಪಾಯಿತಲ್ಲ, ಅಷ್ಟೇ ಸಾಕು !

ಗಾಂಧಿ ಅವರನ್ನು ವಿಶಾಲವಾಗಿ ಬೆಳೆದು ನಿಂತ **'ವಟವೃಕ್ಷ'** ಕ್ಕೆ ಹೋಲಿಸಿರುವುದು ಅವರ ಹಿರಿಮೆಯ ಸಂಕೇತವಾಗಿದೆ. ಆ ಮರದ ನೆರಳಿನಲ್ಲಿ ಅಂದರೆ ಅವರ ಆದರ್ಶ, ತತ್ವ, ಚಿಂತನೆಗಳಲ್ಲಿ ನಾವು ಬದುಕುತ್ತಿದ್ದೇವೆ. ಆದರೆ –

ಅದರ ಪೊಟರೆಗಳಲ್ಲಿಂದು ಮನೆಮಾಡಿಕೊಂಡಿವೆ ಚೇಳು,
ಮಂಡಲದ ಹಾವು, ಗೋಸುಂಬೆ ; ಕೊಂಬೆಗಳಲ್ಲಿ
ತೊಗಲ ಬಾವಲಿ ಜೋತು, ಗೂಗೆ ಜೂಗರಿಸಿವೆ–
ಅದು ಬೇರೆಯೇ ಕತೆ !

ಎಂದಿದ್ದಾರೆ. ಇದು ಸಮಾಜದಲ್ಲಿರುವ ದುಷ್ಟ ಮನುಷ್ಯರ ಚಿತ್ರಣವನ್ನು ನೆನಪಿಸುತ್ತದೆ.

ಗಾಂಧಿಜೀಯವರು ಹುಟ್ಟದಿದ್ದರೆ ನಮಗೆ ಸ್ವಾತಂತ್ರ ದೊರೆಯುತ್ತಿರಲಿಲ್ಲ. ನೆಮ್ಮದಿಯ ಬದುಕು ನಮ್ಮದಾಗುತ್ತಿರಲಿಲ್ಲ, ಜೀತದ ಬಾಳು ನಡೆಸುತ್ತಾ ಇನ್ನು ದಾಸ್ಯರಾಗಿಯೇ ಉಳಿದು ಹುಟ್ಟಿಯೂ ಸತ್ತಂತೆ ಇರಬೇಕಾಗಿತ್ತು ಎಂಬ ಸ್ಥಿತಿಯನ್ನು ನೆನೆದರೆ ಎದೆ ನಡುಗುತ್ತದೆ ಎಂದು ಮಹಾತ್ಮನ ಬಗ್ಗೆ ಕೃತಜ್ಞತೆ ವ್ಯಕ್ತಪಡಿಸಿದ್ದಾರೆ. ಆದರೆ ಅವರ ಉಪಕಾರವನ್ನು ಮರೆತು ಕೃತಘ್ನರಾಗಿರುವ ಜನ ಅವರನ್ನು ಅವತಾರ ಪುರುಷರ ಪಟ್ಟಿಯಲ್ಲಿ ಸೇರಿಸಿ ಕೈಕಟ್ಟಿ ಕೂತಿದ್ದಾರೆ. ನಿನ್ನ ಸಾಧನೆ ಅವರಿಗೆ ಅರ್ಥವಾಗಿಲ್ಲ ಎಂಬ ವಿಷಾದವನ್ನು ವ್ಯಕ್ತಪಡಿಸಿದ್ದಾರೆ. ಇದು ಇಂದಿನ ಮನುಷ್ಯ ಯಾವ ದಿಕ್ಕಿನಲ್ಲಿ ಯೋಚಿಸುತ್ತಿದ್ದಾನೆ ಎಂಬುದನ್ನು ತಿಳಿಸುತ್ತದೆ.

ಕವನದ ಕೊನೆಯಲ್ಲಿ ಕಾಣಿಸಿಕೊಂಡಿರುವ ಕವಿಯ ಆತಂಕ ವಾಸ್ತವ ಸತ್ಯವಾಗಿದ್ದು ಭವಿಷ್ಯದ ಮುನ್ನುಡಿಯಂತಿದೆ.

**ಮತ್ತೊಮ್ಮೆ ಈ ನಾಡ ಭಾಗ್ಯ ಪಶ್ಚಿಮದತ್ತ**
**ಇಳಿವಂತೆ ತೋರುತಿದೆ, ಕಾಣು ತಂದೆ ;**
**ನೀ ತಂದ ಸರ್ವೋದಯವ ರಾಹುಕೇತುಗಳು**
**ನುಂಗದೊಲು ಕಾಪಾಡು, ನಮನವೆಂದೆ !**

ಎಂಬ ಸಾಲುಗಳು ಹೀಗೆ ಮುಂದುವರೆದರೆ ಮತ್ತೆ ನಾವು ಪಾಶ್ಚಾತ್ಯರಿಗೆ ದಾಸ್ಯರಾಗುವ ದಿನ ದೂರವಿಲ್ಲ ಎಂಬ ಭಯದಿಂದ 'ಕಾಪಾಡು ತಂದೆ' ಎಂದು ಮಹಾತ್ಮಾನ ಮೊರೆ ಹೋಗಿದ್ದಾರೆ.

**'ಪ್ರಕೃತಿ'** ಕವನ ಸಂಕಲನದ **'ಬಸವಸ್ಮೃತಿ'** ಮತ್ತು **'ಪರ್ಯಾಯ'** ಕವನ ಸಂಕಲನದ **'ನೆಪ'** ಕವನಗಳಲ್ಲಿ ಬಸವಣ್ಣನ ವ್ಯಕ್ತಿತ್ವವನ್ನು ಅನಾವರಣಗೊಳಿಸಿದ್ದಾರೆ.

ಇಲ್ಲಿ ಕವಿ ಎಲ್ಲಾ ಕಾಲಕ್ಕೂ ಸಲ್ಲುವ ಕಲ್ಮಷವಿಲ್ಲದ ಬಸವಣ್ಣನವರ ವ್ಯಕ್ತಿತ್ವವನ್ನು ಶುದ್ಧ ಅಪರಂಜಿಗೆ ಹೋಲಿಸುತ್ತಾ ಅದಕ್ಕೆ ಲಿಂಗವೇ ಶರಣಾದರೂ ನಾವು ಶರಣಾಗಲಿಲ್ಲ ಎಂದು ನಮ್ಮ ನಿಕೃಷ್ಟ ವ್ಯಕ್ತಿತ್ವವನ್ನು ಹೀಗೆ ಹೇಳುತ್ತಾರೆ.

**ನಾವು ಮನದೆರೆದರೇನು ಕಾಣುವುದು: ಬರಿಯ ಕಪ್ಪೆಚಿಪ್ಪು ;**
**ನೀನು ಮನದೆರೆದೆ: ಕನ್ನಡಕೆ ಬಂತು ಹವಳ ರತ್ನ ಮುತ್ತು !**
**ಜಗದ ಡೊಂಕ ತಿದ್ದುವರೆ ಮುನ್ನ ನೀ ನಿನ್ನ ತಿದ್ದಿಕೊಂಡೆ ;**
**ಶಿವದ ಬೆಳಕಿನಲಿ ನಿನ್ನ ಅಂತರಂಗವನು ಮಿದ್ದಿಕೊಂಡೆ !**

ಹೀಗೆ ನಿಷ್ಕಲ್ಮಶವಾಗಿ, ಆತ್ಮಶುದ್ಧಿಯನ್ನು ಹೊಂದಿದ ನೀನು ಘನತಮಂಧದಲಿ ಮುಳುಗಿರುವ ನಮ್ಮನ್ನು ಮೇಲೆತ್ತು ಬಾ ಎಂಬ ಕರೆಯಿದೆ.

**'ನೆಪ'** ಕವನದಲ್ಲಿ ಅಸಮಾನ್ಯನಾದ, ಪರಿಪೂರ್ಣನಾದ ಬಸವಣ್ಣ ತನ್ನನ್ನು ಬೈದುಕೊಳ್ಳುವ ನೆಪದಲ್ಲಿ ಇಡೀ ಸಮಾಜವನ್ನು ಟೀಕಿಸಿರುವಂತಿರುವುದನ್ನು ಗುರುತಿಸಿದ ಕವಿ ಬಸವಣ್ಣನನ್ನೇ ಟೀಕಿಸಿರುವ ಬಗೆಯನ್ನು ಕಾಣಬಹುದು.

"ಎನ್ನ ಚಿತ್ತ ಅತ್ತಿಯ ಹಣ್ಣು ನೋಡಯ್ಯ !"
"ಇಹಲೋಕ ದುಃಖಿ, ಪರಲೋಕ ದೂರ !"
"ಎನ್ನ ನಡೆಯೊಂದು ಪರಿ, ನುಡಿಯೊಂದು ಪರಿ !"
ಮುಂತಾದ ಮಾತುಗಳು ಎಷ್ಟು ಕರಾರುವಾಕ್ಕಾಗಿ
ಬಣ್ಣಿಸುತ್ತವೆ ಇಂದಿಗೂ ನಮ್ಮನ್ನು !

ಹೀಗೆ ಪರೋಕ್ಷವಾಗಿ ಟೀಕೆ ಮಾಡಿರುವುದರಿಂದ ಬಸವಣ್ಣನನ್ನು 'ಶುದ್ಧ ನವ್ಯ' ಎಂದು ಕರೆದಿದ್ದಾರೆ ಹೊಸತನ ಕಂಡಿದ್ದಾರೆ.

**'ಅನಂತ-ಪೃಥ್ವೀ'** ಕವನ ಸಂಕಲನದ **'ಕವಿ ಕುವೆಂಪುವಿಗೆ'** ಕವನದಲ್ಲಿ ಸಿ.ಪಿ.ಕೆ ಅವರು ತಮ್ಮ ಮೇಲೆ ಕುವೆಂಪು ಅವರ ಗಾಢ ಪ್ರಭಾವ ಉಂಟಾಗಿರುವುದನ್ನು ಹೇಳಿದ್ದಾರೆ.

ಆಧುನಿಕ ಕನ್ನಡದ ಸಾಹಿತ್ಯ ಗಗನದಲ್ಲಿನ ಸೂರ್ಯ ಕುವೆಂಪು ಅವರು ಎನ್ನುತ್ತಾ ಅವರ ಕಾವ್ಯ ಶಕ್ತಿಯನ್ನು ತಿಳಿಸಿದ್ದಾರೆ.

ನಿಮ್ಮ ಕಾವ್ಯದ ಭವ್ಯ ಸೌಂದರ್ಯ ಮಾಧುರ್ಯ
ದೈತ್ಯಶೈಲಿಯ ಮೆಚ್ಚಿ ತಲೆದೂಗರಾರು?
ಕನ್ನಡದ ಕೀರ್ತಿಯನು ದೆಸೆದೆಸೆಗೆ ಹರಡಿದಿರಿ,
ನಿಮ್ಮಿಂದ ದೃಢವಾಯ್ತು ಕನ್ನಡದ ಬೇರು !

ಹೀಗೆ ಕನ್ನಡ ಮಾತೆಗೆ ವಿಶಿಷ್ಟ ಸೇವೆ ಸಲ್ಲಿಸಿದ ಕುವೆಂಪುರವರನ್ನು ವಾಗ್ದೇವತೆಯ ಮುದ್ದುಗುವರ, ಕಾವ್ಯಋಷಿ ಎನ್ನುತ್ತಾ ಅವರನ್ನು ಪಡೆದ 'ಕನ್ನಡಾಂಬೆ ಧನ್ಯ' ಎಂದು ಪೂಜ್ಯ ಭಾವನೆಯನ್ನು ವ್ಯಕ್ತಪಡಿಸಿದ್ದಾರೆ.

**'ವರ್ತಮಾನ'** ಕವನ ಸಂಕಲನದ **'ತ್ರಿವಿಕ್ರಮ'** ಕವಿತೆಯಲ್ಲಿ ಕವಿಯಾದ ಸಿಪಿಕೆ ಅವರು ಮಹಾಕವಿಯಾದ ಕುವೆಂಪುರವರನ್ನು ಕಂಡಿರುವ ಬಗೆ ಹೀಗಿದೆ.

ಜನಿವಾರ ಶಿವದಾರ ನಾಮ ಮುದ್ರೆಗಳಿಲ್ಲ-
ನೀನು ಆಗಸದ ಹಾಗೆ, ಕಡಲಿನ ಹಾಗೆ
ನಿರುಪಾಧಿಕ, ಅನಿಕೇತನ !
ತ್ರಿವಿಕ್ರಮ ನೀನು :
ಭೂತ, ವರ್ತಮಾನ, ಭವಿಷ್ಯತ್ತಿನಲ್ಲಿ
ವೇದೋಪನಿಷತ್ತು, ವಿಜ್ಞಾನ, ರಸಾನುಭೂತಿಗಳಲ್ಲಿ
ಭದ್ರ ಪಾದಗಳನ್ನೂರಿ ನಿಂತವನು !

**'ಕನವರಿಕೆ'** ಕವನ ಸಂಕಲನದ **'ಕುವೆಂಪು ೯೦'** ಕವನದಲ್ಲಿ ಕುವೆಂಪು ಅವರು ೯೦ರ ದಶಕಕ್ಕೆ ಕಾಲಿಟ್ಟ ಸಂದರ್ಭದಲ್ಲಿನ ಸಾಧನೆಯ ಚಿತ್ರಣವನ್ನು ಕಟ್ಟಿಕೊಟ್ಟಿದ್ದಾರೆ.

ಮಲೆನಾಡಿನುತ್ತುಂಗ ಧೀರ ವನರಾಜಿ, ಸಹ್ಯಾದ್ರಿಸಾಲು
ತಡೆ ಮುಗಿಲ ಪಡೆಗೆ ! ಆಃ,
ಎಂಥ ಜಡಿಮಳೆ, ಗುಡುಗು, ಮಿಂಚು, ಆಗಾಗ
ಸಿಡಿಲಿನಾರ್ಭಟ !
ಬರಿಯ ವಾಗ್ಭಟನಲ್ಲ ; ವರ್ಣಶಿಲ್ಪದ ಚದುರು ;
ಕಾಮನ ಬಿಲ್ಲ ಬೆರಗು !

ಕವಿ ಕಂಡಿರಿಸಿದ ಪ್ರಕೃತಿಯ ಚೆಲುವಿನ ಚಿತ್ರಣ ಕಟ್ಟಿಕೊಟ್ಟಿದ್ದಾರೆ.

'ಕನ್ನಡಿಯ ಕಿಚ್ಚು' ಕವನ ಸಂಕಲನದ 'ಕುವೆಂಪು ಕುರಿತು' ಕವನದಲ್ಲೂ ಕೂಡ ಕುವೆಂಪುರವರ ಸಾಧನೆ ಮತ್ತು ಕಾವ್ಯದ ವಸ್ತುಗಳ ಚಿತ್ರಣವಿದೆ. ಮಲೆನಾಡಿನ ಕೂಸಾದ ಕುವೆಂಪುರವರು ಫಲ ನೀಡಿದ ರೀತಿಯನ್ನು–

**ಮಲೆಯ ನಾಡಿನ ಬೀಜ ಮೊಳೆತು ಗಿಡ, ಮರವಾಗಿ,**<br>
**ಯುಗದ ಸಾರವನ್ನೆಲ್ಲ ಹೀರಿ ಸುರತರುವಾಗಿ,**<br>
**ನೆರಳು ಹೂ ಹಣ್ಣುಗಳ ಕೊಟ್ಟ ಕಟ್ಟಚ್ಚರಿಯೆ –**

ಎಂದು ಬಣ್ಣಿಸಿದ್ದಾರೆ.

'ನೀವೆ ನಮಗೆ ದಿಕ್ಕು' ಕವನ ಸಂಕಲನದ 'ಕಿಂಡಿ' ಕವನವು ಕನಕದಾಸರನ್ನು ಕುರಿತು ರಚಿಸಿದ್ದಾಗಿದೆ. ಕನಕದಾಸರನ್ನು ಚಿನ್ನಕ್ಕೆ ಹೋಲಿಸಿದ್ದಾರೆ. ಅಷ್ಟೇ ಅಲ್ಲ ಜಾತಿಯಲ್ಲಿ ಆತ ಕುರುಬನಾದರೆ ನಾವೆಲ್ಲ ಕುರಿಗಳು. ನಮ್ಮನ್ನು ಸರಿದಾರಿಯಲ್ಲಿ ನಡೆಸುವ ಯಜಮಾನ ಆತ ಎಂಬ ನಿಲುವು ಔಚಿತ್ಯಪೂರ್ಣವಾಗಿದೆ.

ಸ್ವರ್ಗ–ಮರ್ತ್ಯಕೆ ಗಟ್ಟಿ ಸೇತುಗಟ್ಟಿದ ಶೂರ ಇವನು. ಇಂಥವರು ಮನುಜರ ಉದ್ಧಾರಕ್ಕಾಗಿ ಶ್ರಮಿಸಿದ್ದಾರೆ. 'ಪರಕೆ ಕಿಂಡಿಯಾದವರು' ಎಂಬ ಮಾತು ಲೌಕಿಕ ಜೀವನಕ್ಕೆ ಮಿಗಿಲಾದ ಅಧ್ಯಾತ್ಮ ದರ್ಶನಕ್ಕೆ ಕಾರಣರಾದ ರೀತಿಯನ್ನು ತಿಳಿಸುತ್ತದೆ.

'ಬೊಗಸೆ' ಕವನ ಸಂಕಲನದ 'ರಸಸಿದ್ಧಿ' ಕವನವು ಪು.ತಿ. ನರಸಿಂಹಾಚಾರ್ಯರನ್ನು ಕುರಿತು ಬರೆದದ್ದಾಗಿದೆ.

ಪು.ತಿ.ನ ಅವರ ವ್ಯಕ್ತಿತ್ವವನ್ನು ಅನಾವರಣಗೊಳಿಸಿದ್ದಾರೆ. ಅವರು ಹಿರಿಯರಾಗಿಯೂ ಕಿರಿಯರ ಮೇಲಿನ ಗಾಢ ಪ್ರೀತಿಗೆ "ಕಡಲಾಗಿಯೂ ದಡದ ಮಕ್ಕಳಿಗೆ ಸಲಿಗೆ ನಿರ್ಭೀತಿಗಳನೆಸಗುಪಿರಿ" ಎಂಬ ಮಾತು ಸಾಕ್ಷಿಯಂತಿದೆ.

ಪ್ರೀತಿಸುವವರನ್ನು, ಪ್ರೀತಿ ಪಾತ್ರರನ್ನು ಹೇಗೆ ಆತ್ಮೀಯತೆಯಿಂದ ಕಾಣುತ್ತಿದ್ದರೆಂಬುದಕ್ಕೆ ಕವಿತೆಯ ಕಡೆಯ ಸಾಲುಗಳು ನಿದರ್ಶನವಾಗಿವೆ.

**ಕಂಡೊಡನೆ ಕರೆದು ಹತ್ತಿರಕೆಳೆದು ಕೈಕುಲುಕಿ**<br>
**ಬೆನ್ನಟ್ಟ ಅಕ್ಕರದಿ ನುಡಿವ ನುಡಿಸುವ ನಿಮ್ಮ**<br>
**ಸಂಗದಲಿ ಚಣ ಕಳೆದರೂ ನೆನಪು ಕವಿವಾಣಿ :**<br>
**'ಭಾವಸ್ಥಿರಾಣಿ ಜನನಾಂತರ ಸೌಹೃದಾಣಿ' !**

'ಬೊಗಸೆ' ಕವನ ಸಂಕಲನದ 'ತೀರ್ಥಂಕರ' ಕವನವು ಶಬ್ದಗಾರುಡಿಗ ಬೇಂದ್ರೆಯವರ ವ್ಯಕ್ತಿತ್ವ ಮತ್ತು ಸಾಹಿತ್ಯ ಸಾಧನೆಯನ್ನು ತಿಳಿಸಿಕೊಡುತ್ತದೆ.

**ಮಾತೆಲ್ಲ ಮಂತ್ರ, ಬಂಧುರ ನಾದನವನೀತ ;**<br>
**ಭೃಂಗವಾಹನನಾದ ಕಲ್ಪನೆಯ ಸುವಿಲಾಸ !**<br>
**'ಹಕ್ಕಿ ಹಾರುತಿದೆ, ನೋಡಿದಿರ ?' ಎಂದಾಗಸವ**<br>
**ಕನ್ನಡದ ಜನಕೆಲ್ಲ ತೋರಿಸಿದ ಗಾರುಡಿಗ !**

ದುಡಿದು ಬೇಸತ್ತು ಸತ್ತವರಿಗೆ, ಅತ್ತವರಿಗೆ ಹಾಡೆಂಬ ಸಂಜೀವಿನಿಯನ್ನು ನೀಡಿದೆ. ನಿನ್ನ ಉಪಕಾರ, ಋಣ ದೊಡ್ಡದು ಎಂದು ಶ್ಲಾಘಿಸುತ್ತ

**ನಿನ್ನ ಋಣವನು ನಾವು ತೀರಿಸುವ ಪರಿಯೆಂತು?–**
**ನಿನ್ನ ಕೃತಿಗಳನೋದಿ ಕಾವ್ಯಯೋಗಕೆ ನೋಂತು!–** ಎಂದಿದ್ದಾರೆ.

**'ಬೋಗಸೆ'** ಕವನ ಸಂಕಲನದ **'ಪುಣ್ಯಪುರುಷ'** ಕವನದಲ್ಲಿ ಪಂಜೆಮಂಗೇಶರಾಯರನ್ನು ಕುರಿತು ಬರೆದಿದ್ದಾರೆ.

ಕನ್ನಡ ನಾಡು ನುಡಿ ಇಂದು ಹೆಮ್ಮರವಾಗಿ ಬೆಳೆದಿರುವುದಕ್ಕೆ ಹಿಂದಿನವರೇ ಕಾರಣ. ಸಸಿನೆಡದೆ ಹಣ್ಣು ಸವಿಯಲು ಸಾಧ್ಯವಿಲ್ಲ, ಕೆರೆ ಕಟ್ಟಿಸದೆ ನೀರು ಕುಡಿಯಲು ಸಾಧ್ಯವಿಲ್ಲ. ಆದರೆ ಹಣ್ಣು ತಿಂದು ನೀರು ಕುಡಿಯುತ್ತಿರುವ ನಮಗೆ ನಿಮ್ಮ ಆದರ್ಶ ಬದುಕು ಸ್ಫೂರ್ತಿಯಾಗಿದೆ ಎಂಬುದನ್ನು ತಿಳಿಸಿದ್ದಾರೆ.

**ಕವಿಯಾಗಿಯೂ ನೀವು ವಿನಯದಲಿ 'ಕವಿಶಿಷ್ಯ';**
**ಇಂದು ಕವಿನಾಮಕರ ಗರ್ವಬ್ರಹ್ಮಾಂಡವನು**
**ಕಾಣುತಿಹೆವದನು ಭೇದಿಸಲಿ ನಿಮ್ಮಾದರ್ಶ !**
**ಬದುಕು–ಬರಹದ ಹಿರಿಮೆಯನು ಸಾಧಿಸಿದ ನಿಮ್ಮ**
**ನುಡಿಬೆಸನ ಪಾಠ, ತಾತ್ಸಾರಕಿತ್ತ ವಿರಾಮ !**

ಎಂದು ಹೇಳುವುದರ ಮೂಲಕ ಪಂಜೆ ಮಂಗೇಶರಾಯರು ಬದುಕು–ಬರಹದ ಹಿರಿಮೆಯನ್ನು ಸಾಧಿಸಿದ ಬಗೆಯನ್ನು ತಿಳಿಸುತ್ತದೆ.

**"ನೂರೊಂದು"** ಕವನ ಸಂಕಲನದ **'ಅಂಬಿಗರ ಚೌಡಯ್ಯ'** ಕವನವು ವಚನಕಾರರ ವೃಂದದಲ್ಲಿ ಮುಖ್ಯರಾಗಿದ್ದುಕೊಂಡು ನಡುನೀರಿನಲ್ಲಿದ್ದ ಕನ್ನಡ ಸಮಾಜ ಮತ್ತು ಸಾಹಿತಿಗಳನ್ನು ಎತ್ತಿ ಹರುಗೋಲಿನಲಿ ದಡವ ಮುಟ್ಟಿಸಿದ ಶಕ್ತಿಯಾಗಿರುವ ಚೌಡಯ್ಯ ನವರ ಬಗ್ಗೆ ತಿಳಿಸುತ್ತದೆ.

ಸಾಧನೆಗೆ ಜಾತಿ ಮುಖ್ಯವಲ್ಲ, ಮನಸ್ಸು ಮುಖ್ಯ ಎಂಬುದನ್ನು ಚೌಡಯ್ಯನವರ ಸಾಧನೆಯ ಉದಾಹರಣೆ ನೀಡಿ ಹೇಳಿದ್ದಾರೆ.

**ಕೀಳೆನಿಸಿದೆಂಥ ಜಾತಿಯಲಿ ಹುಟ್ಟಿದ ಮಂದಿ**
**ಭಕ್ತಿ, ಅನುಭಾವ, ಚಿಂತನದ ಎಂತಹ ಸಿದ್ಧಿ–**
**ಶೃಂಗಗಳನೇರಬಲ್ಲರು ಅನುವು ಸಿಕ್ಕಿದರೆ**
**ಎಂಬುದಕೆ ನೀನೊಂದು ಹೊಳೆಹೊಳೆವ ದೃಷ್ಟಾಂತ.**

ಯಾರು ನಿಮ್ಮನ್ನು ಗಮನಿಸಲಿ ಬಿಡಲಿ ನಕ್ಷತ್ರ, ಸೂರ್ಯ, ಚಂದ್ರರ ಹಾಗೆ ನೀವು ಸದಾ ಬೆಳಗುವ ಶರಣರು ಎಂದಿರುವುದು ಕನ್ನಡ ನಾಡು–ನುಡಿಯನ್ನು ಉದ್ಧರಿಸಿದ ಅವರ ಭವ್ಯ ವ್ಯಕ್ತಿತ್ವಕ್ಕೆ ಸಂದ ಗೌರವವಾಗಿದೆ.

**'ನೀವೆ ನಮಗೆ ದಿಕ್ಕು'** ಕವನ ಸಂಕಲನದ **'ಹರಿಕಾರ'** ಕವನವು ಬಿ.ಎಂ.ಶ್ರೀ ಅವರನ್ನು ಕುರಿತ ಕವಿತೆಯಾಗಿದೆ. ಶ್ರೀ ಅವರು 'ಇಂಗ್ಲೀಷ್ ಗೀತೆಗಳು' ಕೃತಿಯ ಮೂಲಕ ಕನ್ನಡ ಸಾಹಿತ್ಯದ

ನವಹುಟ್ಟಿಗೆ ಕಾರಣರಾದರು. ಸಂಪ್ರದಾಯವನ್ನು ಮೆಟ್ಟಿ ನಿಂತು ಹೊಸತನವನ್ನು ಮೂಡಿಸಿದರು. ಶ್ರೀ ಅವರ ದುಡಿಮೆಯಿಂದ ಕನ್ನಡ ಬಾವುಟ ಏಳ್ಗೆ ಹೊಂದಿತು ಎಂಬ ಅಂಶಗಳು ಈ ಕವಿತೆಯಲ್ಲಿ ಮಿಳಿತವಾಗಿದೆ. ಶ್ರೀ ಅವರ ಸಾಧನೆಯಿಂದ ಆಧುನಿಕ ಕನ್ನಡ ಸಾಹಿತ್ಯದಲ್ಲಾದ ಕ್ರಾಂತಿಯ ಚಿತ್ರಣ ಕವಿತೆಯಲ್ಲಿದೆ.

**'ಗೂಢ'** ಕವನದಲ್ಲಿ ಮಾಸ್ತಿಯವರನ್ನು ಕುರಿತು ಹೇಳಲಾಗಿದೆ. ಮಾಸ್ತಿ ಅವರನ್ನು ಕನ್ನಡದ ಆಸ್ತಿ ಎಂದು ಕರೆದಾಗ ಬಂದ ಕುಹಕದ ಮಾತುಗಳನ್ನು ಅಲ್ಲಗಳೆಯುತ್ತಾ ಸಂಸ್ಕೃತಿಗೆ ಮತ್ತೊಂದು ಹೆಸರೇ ಮಾಸ್ತಿ ಮೌಲ್ಯಗಳ ಸಾಕಾರ ಮೂರ್ತಿ ಎಂದಿದ್ದಾರೆ.

ಅವರ ಉತ್ಸಾಹ ಯುವಕರನ್ನು ನಾಚಿಸುವಂಥದ್ದು. ಅವರನ್ನು ಯಾರಿಂದಲೂ ಸಂಪೂರ್ಣವಾಗಿ ಅರಿಯಲು ಸಾಧ್ಯವಿಲ್ಲ. ಅವರ ವ್ಯಕ್ತಿತ್ವವೇ ರಹಸ್ಯವಾದುದು ಎಂಬುದನ್ನು ಈ ರೀತಿ ಹೇಳಿದ್ದಾರೆ.

**ಆ ಸನ್ನಶತಕ ಆಯುಷ್ಯದಲಿ; ಹರಯವನು**
**ಜರಿವಂಥ ಚೈತನ್ಯ, ಚಟುವಟಿಕೆ: ಬರಡು ಹೊಲ-**
**ಗಳನು ನಾಚಿಸುವ ಫಲಭರಿತ ತೋಟ-ಪವಾಡ;**
**ಇತರರಿಗೆ ಇಂಥವರ ಪರಿ ನಿಲುಕದಿಹ ಗೂಢ!**

ಆಚಾರ್ಯವರ್ಯ ಕವನದಲ್ಲಿ ಕವಿ ಸಿ.ಪಿ.ಕೆ ಟಿ.ಎಸ್.ವೆಂಕಣ್ಣಯ್ಯನವರನ್ನು ಕಂಡಿರುವ ಬಗೆ ಈ ರೀತಿ ಇದೆ-

**ಲೇಖಕರ ಸೃಷ್ಟಿಸಿದ ಬ್ರಹ್ಮ, ಲೋಕದ ಬಂಧು,**
**ಓ ಎತ್ತರದ ವ್ಯಕ್ತಿ, ನಿಮ್ಮ ನೆನೆದರೆ ಇಂದು-**
**ಕಲ್ಪವೃಕ್ಷವೆ ಒಲಿದು ನೆಲಕೆ ಬಾಗಿದ ಹಾಗೆ,**
**ನಮ್ಮ ಚೇತನ ತಟಕ್ಕನೆಯೆ ಮಾಗಿದ ಹಾಗೆ!**

**'ರುದ್ರನಾಯಕ'** ಕವಿತೆಯು ಡಿ.ದೇವರಾಜ ಅರಸು ಅವರ ಸಾಧನೆ ಮತ್ತು ಅಂತ್ಯದ ಬಗ್ಗೆ ತಿಳಿಸುತ್ತದೆ. ಅರಸು ಮನೆತನದಲ್ಲಿ ಹುಟ್ಟಿ, ಸಾಮಾನ್ಯ ಜನರ ನಡುವೆ ಬೆಳೆದು ಜನಪ್ರತಿನಿಧಿಯಾಗಿ ಸರ್ವರ ಉದಯಕ್ಕಾಗಿ ದುಡಿದ ದೇವರಾಜ ಅರಸರು ಯಾರೂ ಮಾಡದಿದ್ದ ಕಾರ್ಯಗಳನ್ನು ಮಾಡಿ ಮೆಚ್ಚುಗೆ ಪಡೆದರು. ಅದನ್ನು ಕವಿ ಹೀಗೆ ಹೇಳಿದ್ದಾರೆ.

**ಯಾವ ಭೂಪನು ಕೂಡ ಮಾಡಲಾಗದ ಕಜ್ಜ**
**ನೀನು ಮಾಡಿದೆ; ಆಡಳಿತ ಭಾಷೆ ಕನ್ನಡವೆ**
**ಎಂದು ಸಾರಿದೆ; ನಿನ್ನ ನಿಲುವಿನಿಂದೀ ರಾಜ್ಯ**
**ಕರ್ನಾಟಕಾಭಿಧಾನವನು ತಳೆಯಿತು ಮತ್ತೆ.**

**'ನೆಲ್ಸನ್ ಮಂಡೇಲ'** ಕವಿತೆಯಲ್ಲಿ ವರ್ಣಭೇದ ನೀತಿಯ ವಿರುದ್ಧ ಹೋರಾಡಿ ಜೈಲು ಸೇರಿ ತಮ್ಮ ಹೋರಾಟದಲ್ಲಿ ಯಶಸ್ವಿಯಾಗಿ ಬಿಡುಗಡೆ ಹೊಂದಿದ ಮಂಡೇಲ ಅವರನ್ನು ಕವಿ ಬಣ್ಣಿಸಿರುವ ರೀತಿ ಇದು-

ಮಂಡೇಲ, ಕಪ್ಪಾದರೂ ನೀನು ನಕ್ಷತ್ರ
ಮಂಡಲ ಸದಸ್ಯ! ವರ್ಣವ್ಯವಸ್ಥೆಯ ಕೊಳಕು
ಮಂಡಲದ ನಡುವೆ ಅರಳಿತು ಅಮಲವಹ ಬದುಕು!
ನಿನ್ನ ಬಿಡುಗಡೆಯಾಯ್ತು ಭುವನಕ್ಕೆ ಭರವಸೆಯ
ಕಿರಣ: ನೈರಾಶ್ಯವನು ನಾವಿನ್ನು ಬಿಡಬಹುದು!

**'ಕನವರಿಕೆ'** ಕವನ ಸಂಕಲನದ **'ಮಹಾಮಾತೆ'** ಕವನವು ತೆರೆಸಾರ ಸೇವಾ ಮನೋಭಾವ ಮತ್ತು ಮಕ್ಕಳನ್ನು ಹಡೆಯದಿದ್ದರೂ ಎಲ್ಲರಿಗೂ ತಾಯಾಗಿ ಬೆಳಕು ನೀಡಿದ ಅಂಶವನ್ನು ಹೇಳಿದ್ದಾರೆ.

ಇವಳು ನಮ್ಮ ಭೂಮಿಯ ಚಂದ್ರ:
ಗುಡಿಸಲು, ಕೊಳೆಗೇರಿಗಳ ಬೆಳಕು–ಪ್ರಶಾಂತ!
(ಇರಲಿ ಬಿಡಿ, ದೂರದಲ್ಲಿ ಲಕ್ಷ ನಕ್ಷತ್ರ, ಕಣ್ಮಿಟುಕಿಸುತ್ತಾ!)
ಹುಟ್ಟಿ ಬಿಕ್ಕುವ ಅಸಂಖ್ಯಾ ಮಕ್ಕಳಿಗೆ
ದಿಕ್ಕಾದವಳು;
ಹುಟ್ಟದವರೂ ಸಾಯದಿರಲೆಂದು ಹೆಣಗುತ್ತ
ಹಣ್ಣಾದವಳು; ಕ್ರಿಸ್ತನಿಗೊಂದು
ಕಣ್ಣಾದವಳು!

ಹೀಗೆ ಮಹತ್ತರವಾದ ಸಾಧನೆಗೆ ಮಹಾಪುರುಷರು, ಮಹಾನ್ ವ್ಯಕ್ತಿಗಳು ಸ್ಫೂರ್ತಿಯಾಗುತ್ತಾರೆ. ಅವರ ಆದರ್ಶ,ತತ್ವ–ಚಿಂತನೆಗಳು ಬದುಕು ಕಟ್ಟಲು, ಸಮಾಜ ಕಟ್ಟಲು ಕಾರಣವಾಗುತ್ತವೆ. ಯುವ ಜನತೆಗೆ ಅಮೃತ ಸಿಂಚನದಂತಿರುತ್ತವೆ. ಬುದ್ಧ, ಗಾಂಧಿ, ನೆಹರು, ಅಂಬೇಡ್ಕರ್, ಬಸವಣ್ಣ, ಶರಣರು, ದಾಸರು, ಮದರ್ ತೆರೇಸಾ, ನೆಲ್ಸನ್ ಮಂಡೇಲಾ, ಕುವೆಂಪು, ಬೇಂದ್ರೆ, ಕಾರಂತರು, ಪಂಜೆ, ತೀ.ನಂ.ಶ್ರೀ, ಪು.ತಿ.ನ, ಕಣಪಿ, ಇನ್ನೂ ಮೊದಲಾದ ಸಮಾಜದ ಏಳ್ಗೆಗೆ, ನಾಡಿನ ಕೀರ್ತಿಗೆ ದೇಶದ ಖ್ಯಾತಿಗೆ ಕಾರಣರಾದಂತಹ ಭವ್ಯ ಮಾನವರ ವ್ಯಕ್ತಿತ್ವ ಚಿತ್ರಣವನ್ನು ತಮ್ಮ ಕಾವ್ಯಗಳಲ್ಲಿ ಮೂಡಿಸುವುದರ ಮೂಲಕ ನಮಗೂ, ನಮ್ಮ ಮುಂದಿನ ಪೀಳಿಗೆಗೂ ಅವರ ಆದರ್ಶದ ಬೆಳಕು ದೊರೆಯುವಂತೆ ಮಾಡಿದ್ದಾರೆ.

## ಅಡಿ ಟಿಪ್ಪಣಿಗಳು-

೧. ಹೊಸಗನ್ನಡ ಸಾಹಿತ್ಯ ಚರಿತ್ರೆ- ಎಲ್. ಎಸ್. ಶೇಷಗಿರಿರಾವ್, ಪು. ಸಂ. ೧೧, ಅಂಕಿತ ಪ್ರಕಾಶನ-೨೦೦೮, ಬೆಂಗಳೂರು.

೨. ಆಯ್ದ ಕುವೆಂಪು ಕವನಗಳು- ಸಂಪಾದಕರು: ಸಿಪಿಕೆ. ಪು. ಸಂ. ೧. ಚೇತನ ಬುಕ್ ಹೌಸ್- ೧೯೯೦

೩. ಸಿಪಿಕೆ ಸಾಹಿತ್ಯ ಸಮೀಕ್ಷೆ- ಡಾ. ಟಿ.ಕೆ. ಕೆಂಪೇಗೌಡ, ಪು.ಸಂ. ೧೧೭. ಕಣ್ವ ಪ್ರಕಾಶನ, ಬೆಂಗಳೂರು, ೨೦೧೦

೪. ಶಕ್ತಿ ಶಾರದೆಯ ಮೇಳ-ಡಿ. ಆರ್. ನಾಗರಾಜ್, ಪು. ಸಂ. ೧೭೭,ಅಕ್ಷರ ಪ್ರಕಾಶನ , ೨೦೦೮

೫. ಕನ್ನಡದ ಹಾಡುಪಾಡು- ಕೆ. ಸಿ. ಶಿವಾರೆಡ್ಡಿ. ಅಧ್ಯಯನ ಮಂಡಲ ೨೦೦೩

೬. ಆಯ್ದ ಕುವೆಂಪು ಕವನಗಳು- ಸಂಪಾದಕರು: ಸಿಪಿಕೆ. ಪು. ಸಂ. ೧೨೨. ಚೇತನ ಬುಕ್ ಹೌಸ್- ೧೯೯೦

೭. ಪಂಪ ಭಾರತಂ – ಗದ್ಯಾನುವಾದ . ಎನ್. ಅನಂತರಂಗಾಚಾರ್. ಕನ್ನಡ ಸಾಹಿತ್ಯ ಪರಿಷತ್-೨೦೦೭

೮. ಸಿಪಿಕೆ ಸಮಗ್ರ ಕವಿತೆ-೧೯೫೫-೨೦೦೦, ಸಂವಹನ ಮೈಸೂರು

ಅಧ್ಯಾಯ–೫

# ಸಮಾರೋಪ

"ಸಿಪಿಕೆ ಅವರ ಕಾವ್ಯ: ಒಂದು ಅಧ್ಯಯನ" ಎಂಬ ವಿಷಯದಲ್ಲಿ ಸಿ.ಪಿ.ಕೃಷ್ಣಕುಮಾರ್ ಅವರ ಕಾವ್ಯಗಳಲ್ಲಿ ಪ್ರಕೃತಿ, ಜೀವನ ಮತ್ತು ತಾತ್ವಿಕತೆ, ಸಾಮಾಜಿಕ, ನಾಡು–ನುಡಿ, ವ್ಯಕ್ತಿ ಚಿತ್ರಣ– ಇವು ಹೇಗೆ ಮೂಡಿ ಬಂದಿವೆ ಎಂದು ವಿಶ್ಲೇಷಣೆ ಮಾಡಲಾಗಿದೆ. ನವೋದಯ, ನವ್ಯಗಳ ನಡುವಿನ ಕಾಲದಲ್ಲಿ ಆರಂಭಗೊಂಡ ಸಿಪಿಕೆ ಅವರ ಕಾವ್ಯ ಸೃಷ್ಟಿ ಇಂದಿನ ದಲಿತ ಬಂಡಾಯೋತ್ತರ ಘಟ್ಟದವರೆಗೂ ಹರಡಿಕೊಂಡು ಇನ್ನು ಮುಂದುವರಿಯುತ್ತಲೇ ಇದೆ. ಹೀಗೆ ಯಾವುದೇ ಪಂಥ, ಸಿದ್ಧಾಂತ, ವಾದ, ತತ್ವಗಳಿಗೆ ಅಂಟಿಕೊಳ್ಳದೆ ಎಲ್ಲೆಲ್ಲಿ ಒಳ್ಳೆಯ ಅಂಶಗಳಿವೆಯೋ, ಜೀವನದ ಚೆಲುವು ಎಲ್ಲೆಲ್ಲಿ ಹರಡಿದೆಯೋ ಅದನ್ನೆಲ್ಲ ಕಾವ್ಯವಾಗಿಸುತ್ತಾ ಬಂದಿದ್ದಾರೆ. ಜೀವನದಲ್ಲಿ ತಮಗಾದ ಅನುಭವಗಳು, ಕಷ್ಟಸುಖಗಳು, ಸಮಾಜದ ವೈಚಿತ್ರ್ಯಗಳು ಎಲ್ಲವನ್ನು ತಮ್ಮ ಕಾವ್ಯದಲ್ಲಿ ಅಭಿವ್ಯಕ್ತಗೊಳಿಸಿ ಕನ್ನಡ ಸಾಹಿತ್ಯಕ್ಕೆ ಉತ್ಕೃಷ್ಟ ಕವನಗಳನ್ನು ನೀಡುತ್ತಿದ್ದಾರೆ. ಪ್ರಕೃತಿ ಮತ್ತು ಸಮಾಜದ ಜಡ–ಚೇತನ ವಸ್ತುಗಳೆಲ್ಲವನ್ನು ತಮ್ಮದೇ ಆದ ವಿಭಿನ್ನ, ವಿಶಿಷ್ಟ ದೃಷ್ಟಿಕೋನಗಳಿಂದ ನೋಡಿ. ಹಿರಿಯ ಸಾಹಿತಿಗಳಿಂದ ಪ್ರೇರಣೆಗೊಂಡು ಹೊಸ ಹೊಸ ಚಿಂತನೆಗಳನ್ನು ಮೂಡಿಸಿರುವುದನ್ನು ಈ ಅಧ್ಯಯನದಲ್ಲಿ ಅನಾವರಣಗೊಳಿಸಲಾಗಿದೆ.

ಸಿಪಿಕೆ ಅವರ ಕಾವ್ಯಗಳಲ್ಲಿ ವಸ್ತು ವೈವಿಧ್ಯತೆ ಇದೆ. ಪ್ರಕೃತಿ, ಜೀವನ, ತಾತ್ವಿಕತೆ, ಅಧ್ಯಾತ್ಮಿಕತೆ, ಸಮಾಜ, ನಾಡು–ನುಡಿ, ವ್ಯಕ್ತಿ ಚಿತ್ರಣ, ವಿಜ್ಞಾನ, ತಂತ್ರಜ್ಞಾನ, ಧರ್ಮ, ಸಾಹಿತ್ಯ, ಇತಿಹಾಸ ಇನ್ನೂ ಮೊದಲಾದ ಅನೇಕ ವಿಚಾರಗಳನ್ನು ಕುರಿತು ಕಾವ್ಯ ರಚಿಸಿದ್ದಾರೆ. ಈ ನಿಬಂಧದಲ್ಲಿ ಮುಖ್ಯವಾಗಿ ಪ್ರಕೃತಿ, ಜೀವನ ಮತ್ತು ತಾತ್ವಿಕತೆ, ಸಾಮಾಜಿಕ, ನಾಡು–ನುಡಿ, ವ್ಯಕ್ತಿ ಚಿತ್ರಣಗಳಿಗೆ ಸಂಬಂಧಪಟ್ಟ ವಿಚಾರಗಳನ್ನು ಮಾತ್ರ ಗಮನಿಸಲಾಗಿದೆ.

ಜೀವಿಗಳೆಲ್ಲಕ್ಕೂ ನಿಸರ್ಗ ತಾಯಿ. ಅದಿಲ್ಲದೆ ಜೀವಿಗಳಿಲ್ಲ. ಅಂಥ ಪ್ರಕೃತಿಯನ್ನು ಸಿಪಿಕೆ ಅವರು ತಮ್ಮದೇ ನೆಲೆಯಲ್ಲಿ ನೋಡಿದ್ದಾರೆ. ಅಲ್ಲಿನ ಜಡ–ಚೇತನ ವಸ್ತುಗಳೆಲ್ಲವು ಕಾವ್ಯವಾಗಿದೆ. ಪಕೃತಿ–ಮನುಷ್ಯ, ಪ್ರಕೃತಿ–ಸಮಾಜ, ಪ್ರಕೃತಿ–ಜೀವನ, ಪ್ರಕೃತಿ–ನಾಡು ಇವುಗಳ ಪರಸ್ಪರ ಪೂರಕ ಸಂಬಂಧವು ಅವರ ಕವಿತೆಗಳಲ್ಲಿ ಕಾಣಿಸಿಕೊಂಡಿರುವುದನ್ನು ಈ ಅಧ್ಯಾಯಲ್ಲಿ ತಿಳಿಯಬಹುದು. ಪರಿಸರದ ಸೊಬಗು, ವೈಭವ ಸೂರ್ಯ. ಚಂದ್ರ, ನಕ್ಷತ್ರ, ಮಿಂಚು. ಕಾಮನಬಿಲ್ಲು, ಮಳೆ, ಇರುಳು, ಬೆಳಗು–ಹೀಗೆ ಎಲ್ಲವುಗಳ ಚಿತ್ರಣ ಅಪೂರ್ವವಾಗಿದ್ದು ವಿಭಿನ್ನವಾಗಿ ಮೂಡಿ ಬಂದಿದೆ. ಕೇವಲ ಸೊಬಗನ್ನು ಸವಿಯುವ ಸಂತೋಷ ಮಾತ್ರವಲ್ಲದೇ ಪರಿಸರ ನಾಶದ ಬಗ್ಗೆ ವಿಷಾದವು ಇದೆ. ಅದನ್ನು ಉಳಿಸಿ ಬೆಳೆಸುವ ಎಚ್ಚರವು ಸಹ ಕವಿತೆಗಳಲ್ಲಿರುವುದನ್ನು ಗುರುತಿಸಲಾಗಿದೆ.

ಮನುಷ್ಯ ಜೀವನದ ಅನೇಕ ಮಜಲುಗಳು, ಸೋಲು–ಗೆಲುವು, ನೋವು–ನಲಿವು, ಆಸೆ–ನಿರಾಸೆ, ಹಮ್ಮು–ಬಿಮ್ಮು, ಸ್ವಾರ್ಥ, ಅಹಂಕಾರ, ದ್ವಂದ್ವ, ಗೊಂದಲ, ಬೇಡಿಕೆ, ಬಯಕೆ, ದೈನ್ಯತೆ, ಭಯ, ಆತಂಕ ಮುಂತಾದ ಅನೇಕ ಅಂಶಗಳು ಜೀವನದಲ್ಲಿ ಹೇಗೆ ಎದುರಾಗುತ್ತವೆ ಎಂಬುದನ್ನು,

ಅವುಗಳನ್ನು ಮನುಷ್ಯ ಎದುರಿಸುವ ಬಗೆ ಇತ್ಯಾದಿ ಅನೇಕ ವಿಚಾರಗಳನ್ನು ಜೀವನ ಮತ್ತು ತಾತ್ವಿಕತೆಗೆ ಸಂಬಂಧಿಸಿದ ಕವನಗಳಲ್ಲಿ ಕಾಣಬಹುದು.

ಸಾಮಾಜಿಕ ಕವಿತೆಗಳಲ್ಲಿ ಮುಖ್ಯವಾಗಿ ಸಮಾಜ ಮತ್ತು ಮನಷ್ಯನ ಸಂಬಂಧ, ಸಮಾಜಕ್ಕಾಗಿ ಮನುಷ್ಯ ಬದುಕಬೇಕೆಂಬ ಧೋರಣೆ ಇರುವುದನ್ನು ಕಾಣುತ್ತೇವೆ. ಜೊತೆಗೆ ಮನುಷ್ಯನ ಸ್ವಾರ್ಥ, ಅಹಂಕಾರ, ಶೋಷಣೆ, ಅನ್ಯಾಯ ಎಲ್ಲವು ಹೇಗೆ ಸಮಾಜ ವಿರೋಧಿಯಾಗಿ ಮನುಷ್ಯನ ಜೀವನದ ನಾಶಕ್ಕೆ ಕಾರಣವಾಗುತ್ತವೆ ಎಂಬುದನ್ನು ತಿಳಿಯಬಹುದು. ಮೂಲ ಸೌಕರ್ಯದಿಂದ ವಂಚಿತವಾಗಿರುವ ಸಮಾಜದ ಸಾಮಾನ್ಯ ಜನರ ಬವಣೆ, ಅಧಿಕಾರ ಬಲ ಮತ್ತು ಹಣಬಲದಿಂದ ಮೆರೆಯುತ್ತ, ಮೇಲೆ ಬಂದವರನ್ನು ತುಳಿಯುತ್ತಿರುವ ಭಸ್ಮಾಸುರತನ, ಸಮಾಜದಲ್ಲಿ ಒಂದಾಗಿ ಸೌಹಾರ್ದತೆಯಿಂದ ಕೂಡಿ ಬಾಳಬೇಕಾಗಿದ್ದ ಮನುಷ್ಯ ಕಲಹದಲ್ಲಿ ನಿರತನಾಗಿದ್ದು ತನಗೆ ತಾನೇ ಹಾನಿ ಮಾಡಿಕೊಳ್ಳುತ್ತಿರುವುದು, ಅಧಿಕಾರ ಮತ್ತು ಕುರ್ಚಿಯ ಮೇಲಿನ ಮೋಹ, ಸಂಸ್ಕೃತಿಯ ಅಧಃಪತನ ಇವೆಲ್ಲ ಅಂಶಗಳು ಸಾಮಾಜಿಕ ಕವಿತೆಗಳು ಶೀರ್ಷಿಕೆಯಡಿ ಅನಾವರಣಗೊಂಡಿವೆ.

ಪ್ರತಿಯೊಬ್ಬರೂ ತಾವು ಇರುವ ನೆಲ, ಆಡುವ ಭಾಷೆಯ ಬಗ್ಗೆ ಪ್ರೀತಿ ಅಭಿಮಾನ ಹೊಂದಿರುತ್ತಾರೆ. ಅದು ಸಿಪಿಕೆ ಅವರ ಕಾವ್ಯಗಳಲ್ಲೂ ವ್ಯಕ್ತವಾಗಿದೆ. ಭಾರತ ಮಾತೆ, ಆ ಮಾತೆಯ ಮಗಳಾದ ಕನ್ನಡ ತಾಯಿ, ಆ ತಾಯಿಯ ಕನ್ನಡ ನುಡಿ ಇವುಗಳ ಮೇಲೆ ಅಪಾರ ಅಭಿಮಾನ. ಅಷ್ಟೇ ಅಲ್ಲ, ಗತವೈಭವದ ನೆನಪಿನ ಸಂಭ್ರಮವೂ ಕಾಣಿಸಿಕೊಂಡಿದೆ. ಜೊತೆಗೆ ಇಂದು ಕನ್ನಡಕ್ಕೊದಗಿರುವ ಕುತ್ತು, ಅದಕ್ಕಾಗಿ ಆತಂಕ ಮತ್ತು ಆ ಆತಂಕವನ್ನು ದೂರಮಾಡಿಕೊಳ್ಳಲೇ ಬೇಕಾದ ಅನಿವಾರ್ಯತೆ ಎಲ್ಲವು ಅವರ ಕವಿತೆಗಳಲ್ಲಿ ಕಾಣಿಸಿಕೊಂಡಿವೆ.

ಸ್ವಾತಂತ್ರ್ಯಕ್ಕಾಗಿ, ನಾಡು-ನುಡಿಗಾಗಿ ಹೋರಾಡಿದ ಧೀಮಂತ ವ್ಯಕ್ತಿಗಳ ಸಾಧನೆ ಮತ್ತು ವ್ಯಕ್ತಿತ್ವದ ಪರಿಚಯ ಇದೆ. ಕನ್ನಡ ಸಾಹಿತ್ಯವನ್ನು ಬೆಳೆಸಿದ, ಉಳಿಸಿದ, ಅದರ ಕೀರ್ತಿ ಹೆಚ್ಚಿಸಿದ ಅನೇಕ ಸಾಹಿತಿಗಳ ಚಿತ್ರಣವಿದ್ದು ಸಿಪಿಕೆ ಅವರ ಮೇಲೆ ಇವರೆಲ್ಲರ ಪ್ರಭಾವ ಉಂಟಾಗಿರುವುದು ಸಹ ಈ ಕವಿತೆಗಳಿಂದ ತಿಳಿಯುತ್ತದೆ.

ಒಟ್ಟಾರೆಯಾಗಿ ಸಿಪಿಕೆ ಅವರ ಕವನಗಳು ನಮ್ಮ ಸುತ್ತಲಿನ ಎಲ್ಲ ವಿಚಾರಗಳನ್ನು ಚಿತ್ರಿಸುವ ಪ್ರತಿನಿಧಿಗಳಂತಿದ್ದು ಅವುಗಳ ಅರಿವಿನಿಂದ ಬದಲಾವಣೆಯ ಪಥದಲ್ಲಿ ಸಾಗುವ ಕೆಲಸ ಮಾಡಬೇಕಾಗಿದೆ. ಎಲ್ಲ ಕಾವ್ಯಾಸಕ್ತರು ಓದಿ ತಿಳಿಯಬೇಕಾದ ವಿಚಾರಗಳಿದ್ದು, ಜೀವನದ ದಾರಿದೀಪಗಳಾಗಿ ಅವರ ಕಾವ್ಯಗಳು ಬೆಳಗುತ್ತಿವೆ, ಬೆಳೆಯುತ್ತಿವೆ.

# ಗ್ರಂಥ ಋಣ


೧. **ಸಿಪಿಕೆ ಸಮಗ್ರ ಕವಿತೆ (೧೯೫೫-೨೦೦೦)**

ಸಂವಹನ ಪ್ರಕಾಶನ - ೨೦೦೦

೨. **ಹೊಸಗನ್ನಡ ಸಾಹಿತ್ಯ ಚರಿತ್ರೆ – ಪ್ರೊ. ಎಲ್.ಎಸ್. ಶೇಷಗಿರಿರಾವ್**

ಅಂಕಿತ ಪ್ರಕಾಶನ -೨೦೦೮

೩. **ಸಿಪಿಕೆ ಸಾಹಿತ್ಯ ಸಮೀಕ್ಷೆ – ಡಾ॥ ಟಿ.ಕೆ. ಕೆಂಪೇಗೌಡ**

ಕಣ್ವ ಪ್ರಕಾಶನ - ೨೦೧೦

೪. **ಕನ್ನಡದ ಹಾಡುಪಾಡು – ಡಾ॥ ಕೆ.ಸಿ ಶಿವಾರೆಡ್ಡಿ**

ಅಧ್ಯಯನ ಮಂಡಲ -೨೦೦೩

೫. **ಶಕ್ತಿ ಶಾರದೆಯ ಮೇಳ– ಡಿ.ಆರ್.ನಾಗರಾಜ್**

ಅಕ್ಷರ ಪ್ರಕಾಶನ ಹೆಗ್ಗೋಡು -೨೦೦೮

೬. **ಸಾರ್ಥಕ: ಡಾ॥ ಸಿ.ಪಿ.ಕೆ ಅಭಿನಂದನ ಗ್ರಂಥ**

ಸಂಪಾದಕರು : ಜೆ.ಆರ್. ನಂಜುಂಡೇಗೌಡ

೭. ಸೌಂದರ್ಯ ಸಮೀಕ್ಷೆ. – ಜಿ.ಎಸ್.ಎಸ್. – ತಳುಕಿನ

ವೆಂಕಣ್ಣಯ್ಯನವರ ಸ್ಮಾರಕ ಗ್ರಂಥಮಾಲೆ – ೧೯೬೫

೮. ಆಯ್ದ ಕುವೆಂಪು ಕವನಗಳು – ಸಿ.ಪಿ.ಕೆ. – ಚೇತನ್ ಬುಕ್ – ೧೯೯೦

೯. ಹೌಸ್ – ೨೦೧೦

೧೦. ಸಾಹಿತ್ಯ ಮನನ – ಡಾ॥ ಸಿ.ಪಿ.ಕೆ. – ಕಣ್ವ ಪ್ರಕಾಶನ – ೧೯೭೦

೧೧. ಹರಿವ ನೀರಿದು – ಗಂಗಾಧರ ಚಿತ್ತಾಲ – ೨೦೦೧

೧೨. ಇಂಗ್ಲೀಷ್ ಗೀತಗಳು – ಬಿ.ಎಂ.ಶ್ರೀ – ಕಾವ್ಯಾಲಯ ಪ್ರಕಾಶಕರು

ಮೈಸೂರು ಮಲ್ಲಿಗೆ – ಕೆ.ಎಸ್.ನರಸಿಂಹಸ್ವಾಮಿ – ಸ್ಟ್ಯಾಂಡರ್ಡ್ – ೧೯೪೨

೧೩. ಬುಕ್ ಕಂಪನಿ – ೧೯೯೫

೧೪. ಪಾಂಚಜನ್ಯ – ಕುವೆಂಪು – ಉದಯರವಿ ಪ್ರಕಾಶನ – ೨೦೦೫

೧೫. ಪ್ರೇಮಕಾಶ್ಮೀರ – ಕುವೆಂಪು – ಉದಯರವಿ ಪ್ರಕಾಶನ ೨೦೦೬

೧೬. ಪಕ್ಷಿಕಾಶಿ – ಕುವೆಂಪು – ಉದಯರವಿ ಪ್ರಕಾಶನ – ೨೦೦೯

೧೭. ಬೇಂದ್ರೆ ಕಾವ್ಯ – ರಂ.ಶ್ರೀ.ಮುಗಳಿ – ಅಭಿನವ – ೨೦೦೮

ಯುಗಧರ್ಮ ಹಾಗೂ ಸಾಹಿತ್ಯ ದರ್ಶನ – ಕೀರ್ತಿನಾಥ

೧೮. ಕುರ್ತಕೋಟಿ –ಕುರ್ತಕೋಟಿ ಮೆಮೊರಿಯಲ್ ಟ್ರಸ್ಟ್ – ೨೦೦೭

ಪಂಪಭಾರತಂ – ಗದ್ಯಾನುವಾದ – ಎನ್.ಅನಂತರಂಗಾಚಾರ್ –

ಕನ್ನಡ ಸಾಹಿತ್ಯ ಪರಿಷತ್ತು

